ಆಂಡಯ್ಯ ಮಹಾಕವಿ ಪ್ರಣೀತಂ

# ಕಬ್ಬಿಗರ ಕಾವಂ



ಪರಿಷ್ಕೃತ ತೃತೀಯ ಮುದ್ರಣಂ



ಕರ್ಣಾಟಕ ಕಾವ್ಯಮಂಜರಿಯ ಮತ್ತು ಕಾವ್ಯ ಕಲಾನಿಧಿಯ
ಪ್ರವರ್ತಕರೂ ಪ್ರೊಪ್ರೈಟರೂ ಆದ

**ಮಂ॥ ಆ॥ ರಾಮಾನುಜಯ್ಯಂಗಾರ್ಯರಿಂದ**

ಪರಿಶೋಧಿತವಾಗಿ

ಅವರಿಂದ ಬರೆಯಲ್ಪಟ್ಟ ಕವಿಚರಿತ್ರೆ, ವಿಮರ್ಶಾವಿಚಾರ,
ವಿಸ್ತೃತಟಿಪ್ಪಣಿ ಇವುಗಳೊಡನೆ

**ಮಂ॥ ಆರ್॥ ನರಸಿಂಹಾಚಾರ್, ಬಿ. ಎ., ಅವರಿಂದ**

ಮೈಸೂರು
ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್ಸಿನಲ್ಲಿ ಮುದ್ರಿತವಾಗಿ ಪ್ರಕಟಿಸಲ್ಪಟ್ಟಿದೆ
೧೯೩೦

# ಮೂರನೆಯ ಮುದ್ರಣದ ಭೂಮಿಕೆ.

ಈ ಉದ್ಗ್ರಂಥವನ್ನು ಕೀರ್ತಿಶೇಷರಾದ ಶ್ರೀಮಾನ್ ಎಸ್. ಜಿ. ನರಸಿಂಹಾಚಾರ್ಯರೂ ನಾನೂ ಐದು ಕಾಗದದ ಪ್ರತಿಗಳ ಸಹಾಯದಿಂದ ಸನ್ ೧೮೯೩ ನೆಯ ಇಸವಿಯಲ್ಲಿ **ಕರ್ಣಾಟಕ ಕಾವ್ಯಮಂಜರಿ** ಎಂಬ ಮಾಸಪತ್ರಿಕೆಯಲ್ಲಿ ಮುದ್ರಿಸಿದೆವು. ಅನಂತರ ಸನ್ ೧೮೯೬ ರಲ್ಲಿ ಆ ಐದು ಪ್ರತಿಗಳ ಸಹಾಯದಿಂದಲೇ ಪುನಃ ನಾವಿಬ್ಬರೇ ಬೇರೆಯಾಗಿಯೇ ಮುದ್ರಿಸಿದೆವು. ಪ್ರಥಮ ಮುದ್ರಣಕ್ಕೂ ದ್ವಿತೀಯ ಮುದ್ರಣಕ್ಕೂ ಇರುವ ವ್ಯತ್ಯಾಸವನ್ನು ದ್ವಿತೀಯ ಮುದ್ರಣದ ಉಪೋದ್ಘಾತದಿಂದ ತಿಳಿಯಬಹುದು. ಅಲ್ಲಿಂದೀಚೆಗೆ ೩೪ ವರ್ಷಗಳು ಎಲ್ಲೆಲ್ಲಿ ವಿಚಾರಿಸುತ್ತ ಬಂದರೂ ಈ ಗ್ರಂಥಕ್ಕೆ ಒಂದು ತಾಳೆಯ ಮಾತೃಕೆಯೂ ಸಿಕ್ಕದೆ ಹೋದುದು ಬಹಳ ಶೋಚನೀಯವಾಗಿದೆ. ಈಗ ನಮ್ಮಲ್ಲಿ ಅಚ್ಚಾದ ಪ್ರತಿಗಳಲ್ಲಿ ಒಂದು ಪ್ರತಿಯೂ ಕೂಡ ಕ್ರಯಕ್ಕೆ ಇಲ್ಲದೆ ಇರುವುದರಿಂದಲೂ, ಈ ಪುಸ್ತಕವನ್ನು ಅಪೇಕ್ಷಿಸುವವರಿಗೆ ನಮ್ಮಲ್ಲಿ ಪುಸ್ತಕವು ಇಲ್ಲವೆಂದು ಅನೇಕವೇಳೆ ಬರೆದು ಬರೆದು ಬೇಸರಿಕೆಯುಂಟಾದುದರಿಂದಲೂ, ಮೈಸೂರು ವಿಶ್ವವಿದ್ಯಾಲಯದವರು ಈ ಗ್ರಂಥವನ್ನು ಪರೀಕ್ಷಾಗ್ರಂಥವಾಗಿ ಈಗ ನಿರ್ಣಯಿಸಿದುದರಿಂದಲೂ ಈ ತೃತೀಯ ಮುದ್ರಣವನ್ನು ಕೈಕೊಳ್ಳಬೇಕಾಯಿತು. ನಮ್ಮಲ್ಲಿದ್ದ ಕ|| ಖ|| ಘ|| ಎಂಬ ಇದರ ಮೂರು ಮೂಲಮಾತೃಕೆಗಳೂ ಬಹುಕಾಲವಾದುದರಿಂದ ಎಲ್ಲಿಯೋ ಹೋದುವು; ಆದುದರಿಂದ ಈ ಮುದ್ರಣವನ್ನು ಅಚ್ಚಾದ ಎರಡು ಮುದ್ರಣದ ಪ್ರತಿಗಳ ಆಧಾರದ ಮೇಲೆಯೂ, ಗ|| ಎಂಬ ಮೂಲ ಮಾತೃಕೆಯ ಆಧಾರದ ಮೇಲೆಯೂ ಮಾಡಿದೆ. ಈ ಮುದ್ರಣದಲ್ಲಿ ಶಿಥಿಲಾಕ್ಷರನ್ನು ಸೂಚಿಸಲು * ಚಿಹ್ನವನ್ನು ಆಯಾ ಅಕ್ಷರಗಳ ಹಿಂದುಗಡೆ ಹಾಕಿತೋರಿಸಿದೆ. ಈ ಮೂರನೆಯ ಮುದ್ರಣದ ಟಿಪ್ಪಣಿಯಲ್ಲಿ ಎರಡನೆಯ ಮುದ್ರಣದಲ್ಲಿ ಟಿಪ್ಪಣಿಯು ಎಲ್ಲಿ ಸಾಲದೆಂದು ತೋರಿತೋ ಅಲ್ಲಿ ಹೆಚ್ಚಿಸಿಯೂ ಎಲ್ಲಿ ಹೆಚ್ಚೆಂದು ತೋರಿತೋ ಅಲ್ಲಿ ಕಡಮೆಮಾಡಿಯೂ ಇದೆ. ಪೀಠಿಕೆಯ ಭಾಗವಾದ ಕವಿಚರಿತ್ರೆಯಲ್ಲಿ ವಿಚಾರಾರ್ಹವಾದ ಕೆಲವು ವಿಷಯಗಳ ಚರ್ಚೆಯನ್ನು ಹೊಸದಾಗಿ ಸೇರಿಸಿದೆ. ಇದಲ್ಲದೆ ಗ್ರಂಥದ ವಿಮರ್ಶೆಯೂ, ಕವಿತ್ವದ ಮಹತ್ವವೂ ಯಥಾಶಕ್ತಿ ಅಲ್ಲಲ್ಲಿ ಸೇರಿಸಲ್ಪಟ್ಟಿದೆ.

September 1930. **M. A. Ramanuja Iyenger**

# ಪ್ರಥಮ ಮುದ್ರಣದ ಉಪೋದ್ಘಾತ.

---

ಐದು ಪ್ರತಿಗಳ ಸಹಾಯದಿಂದ ಈ ಗ್ರಂಥವನ್ನು ಮುದ್ರಿಸಲಾಯಿತು. ಈ ಪ್ರತಿಗಳಲ್ಲಿ,

ಮೈಸೂರು ವೆಸ್ಲಿಯನ್ ಮಿಷನ್ ಹೈಸ್ಕೂಲ್ ಮಾಜಿ ಮುನಷಿ, ಮ|| ರಾ|| ಅನ್ನದಾನಿಭಟ್ಟರ ಶಾಮಣ್ಣನವರು ಕಳುಹಿಸಿಕೊಟ್ಟದ್ದೊಂದು. ಇದೇ ಕ|| ಪುಸ್ತಕ.

ಮೈಸೂರು ಮಹಾರಾಜರವರ ಕಾಲೇಜು ಕನ್ನಡ ಮುನಷಿ, ಮ|| ರಾ|| ಕರಿಬಸಪ್ಪ ಶಾಸ್ತ್ರಿಗಳು ಕಳುಹಿಸಿಕೊಟ್ಟ ಪ್ರತಿಗಳೆರಡು. ಅವುಗಳಲ್ಲಿ ಒಂದಕ್ಕೆ ಗ|| ಎಂದೂ, ಮತ್ತೊಂದಕ್ಕೆ ಘ|| ಎಂದೂ ಹೆಸರಿಟ್ಟದೆ.

ಕೇತನಹಳ್ಳಿಯಲ್ಲಿರುವ ಮ|| ರಾ|| ರಾಮಣ್ಣನವರು ಕಳುಹಿಸಿದ್ದೊಂದು. ಇದಕ್ಕೆ ಖ|| ಎಂದು ಹೆಸರು.

ಕೇತನಹಳ್ಳಿಯಲ್ಲಿರುವ ಮ|| ರಾ|| ಗಂಗವಾಡಿ ಉಪಾಧ್ಯಾಯರು ನರಸಿಂಹಯ್ಯನವರಲ್ಲಿ ಒಂದು ಅಸಮಗ್ರ ಪ್ರತಿಯಿತ್ತು. ಅಲ್ಲೇ ಹೋಗಿ ಅದನ್ನು ಸಂಪ್ರತಿಸಿ ನೋಡಲಾಯಿತು.

ಈ ಪ್ರತಿಗಳಲ್ಲಿ ಖ|| ಪುಸ್ತಕವು ಕ|| ಪುಸ್ತಕದ ಪ್ರತಿಯ ಹಾಗೆಯೂ, ಘ|| ಪುಸ್ತಕವು ಗ|| ಪುಸ್ತಕದ ಪ್ರತಿಯ ಹಾಗೆಯೂ ತೋರುತ್ತದೆ. ನಮಗೆ ದೊರೆತ ಪ್ರತಿಗಳಲ್ಲಿ ಬಹಳ ಪುರಾತನ ಪ್ರತಿಯು ಬಹುಶಃ ೬೦-೭೦ ವರ್ಷಗಳ ಹಿಂದೆ ಬರೆದಂತೆ ತೋರುತ್ತದೆ.

ಪ್ರತಿಗಳನ್ನು ದಯಪಿಟ್ಟು ಕಳುಹಿಸಿಕೊಟ್ಟುದಕ್ಕಾಗಿ ಈ ಮಹನೀಯರಿಗೆ ನಾವು ಬಹಳ ಕೃತಜ್ಞರಾಗಿರುತ್ತೇವೆ.

1893. S. G. N. & M. A. R.

## ದ್ವಿತೀಯಮುದ್ರಣದ ಉಪೋದ್ಘಾತ.

ದ್ವಿತೀಯ ಮುದ್ರಣವು ಪ್ರಥಮ ಮುದ್ರಣದಲ್ಲಿ ದೊರತಿದ್ದ ೫ ಪ್ರತಿಗಳಿಂದಲೇ ಸಿದ್ಧವಾಯಿತು. ಅವುಗಳಲ್ಲದೆ ಮತ್ತೆ ಯಾವ ಪ್ರತಿಗಳೂ ದೊರೆಯಲಿಲ್ಲ.

ಪಾಠಾಂತರಗಳು ಟಿಪ್ಪಣಿಯಲ್ಲಿ ಇದ್ದರೆ ಸೌಕರ್ಯವಿಲ್ಲವೆಂದು ತಿಳಿದು ಅಲ್ಲಲ್ಲಿ ಗ್ರಂಥದ ಕೆಳಗೆ ಕೊಟ್ಟಿವೆ. ಶಿಥಿಲಾಕ್ಷರಗಳನ್ನು ತೋರಿಸುವುದಕ್ಕೆ ಆ ಅಕ್ಷರಗಳ (*) ಈ ವಿಧವಾದ ಒಂದು ಹೂ ಹಾಕಿರುತ್ತದೆ.

ಪ್ರಥಮ ಮುದ್ರಣದಲ್ಲಿ ಕಥಾಸಾರವು ಅಸಮಗ್ರವೆಂದು ತಿಳಿದುಬಂದುದರಿಂದ ಪುನಃ ಬರೆಯಲ್ಪಟ್ಟಿರುತ್ತದೆ. ವೃತ್ತಗಳನ್ನೂ ಅವುಗಳ ಲಕ್ಷಣಗಳನ್ನೂ ಆಯಾ ಪದ್ಯಗಳ ಕೆಳಗೆ ಕೊಡುವುದಕ್ಕಿಂತ ಕೊನೆಯಲ್ಲಿ ಒಟ್ಟಿಗೆ ಕೊಡುವುದು ಉಚಿತವೆಂದು ಕಂಡು ಬಂದುದರಿಂದ ಹಾಗೆ ಮಾಡಿದೆ.

ಟಿಪ್ಪಣಿಯಲ್ಲಿ ಕೊಟ್ಟಿರುವ ಅನುವಾದಗಳಲ್ಲಿ ಅನಾವಶ್ಯಕವಾದ ಭಾಗವನ್ನು ಬಿಟ್ಟು ಆವಶ್ಯಕವಾದುದನ್ನಿಟ್ಟಿದೆ. ಟಿಪ್ಪಣವನ್ನು ಎಲ್ಲಿ ಸಾಲದೆಂದು ತೋರಿತೋ ಅಲ್ಲಿ ಹೆಚ್ಚಿಸಿಯೂ, ಎಲ್ಲಿ ಹೆಚ್ಚೆಂದು ತೋರಿತೋ ಅಲ್ಲಿ ಕಡಿಮೆ ಮಾಡಿಯೂ ಇದೆ.

S. G. N.
24th June, 1896. M. A. R.

## ಸಂಕೇತಗಳ ವಿವರಣ.

ಕವಿಚರಿತ್ರೆ, ವಿಮರ್ಶೆ, ಕಥಾಸಾರ, ಟಿಪ್ಪಣಿಗಳಲ್ಲಿ ಕೊಟ್ಟಿರುವ
ಸಂಖ್ಯೆಗಳು—ಗ್ರಂಥಸ್ಥಗದ್ಯಪದ್ಯಗಳ ಸಂಖ್ಯೆಗಳು.
ಶ. ಶಾ—ಶಬ್ದಾನುಶಾಸನ.
ಶ. ದ—ಶಬ್ದಮಣಿದರ್ಪಣ.
ವ್ಯಾ—ವ್ಯಾಖ್ಯಾನ.
ಧಾ—ಧಾತು.
ಪ್ರ—ಪ್ರಯೋಗಾಂತರ, ಅಥವಾ ಸಮಾನಾರ್ಥಕಪ್ರಯೋಗ.
ಕ. ಶ—ಕರ್ಣಾಟಕಶಬ್ದಮಂಜರಿಯೆಂಬ ನಿಘಂಟು.
ದ್ಭ—ತದ್ಭವ. ಉದಾಹರಣೆ. ಬಲ್ಲಹ-ದ್ಭ-ವಲ್ಲಭ. ಎಂದರೆ ವಲ್ಲಭಶಬ್ದದ ತದ್ಭವರೂಪ ಬಲ್ಲಹ ಎಂದರ್ಥ.

# ದ್ವಿತೀಯ ಮುದ್ರಣದ ಪೀಠಿಕೆ.

---

**ಕವಿಚರಿತ್ರೆ—**

ಈ ಗ್ರಂಥಕರ್ತನ ಹೆಸರು ಆಂಡಯ್ಯನು. ಈತನು ಆಂಡಯ್ಯನ ಮಕ್ಕಳಾದ ಸಾಂತ, ಗುಮ್ಮಟ, ವೈಜಣರಲ್ಲಿ ಹಿರಿಯನಾದ ಸಾಂತನ ಮಗನು (೧೦) ಈತನ ತಾಯಿ ಬಲ್ಲವ್ವೆ (೧೧) ಈತನು ಜೈನಮತಕ್ಕೆ ಸೇರಿದವನು. (೧೩) ಈತನು ತನ್ನ ತಾತನನ್ನು "ಲೆಕ್ಕಿಗರ ಪಿರಿಯಂ" ಎಂದೂ (೯), ತನ್ನನ್ನು "ಲೆಕ್ಕಿಗರರಸಂ" (೧೧) ಎಂದೂ ಹೇಳಿ ಕೊಳ್ಳುತ್ತಾನೆ. ಈತನು ಗ್ರಂಥಾಂತ್ಯದ ಗದ್ಯದಲ್ಲಿ ತನ್ನ ಗುರು, ಬಿರುದು ಮುಂತಾದುವನ್ನು ಹೇಳಿಕೊಂಡಿಲ್ಲ. ಈ ಗ್ರಂಥಾವತರಣದಲ್ಲಿ ಕನ್ನಡನಾಡನ್ನು ವರ್ಣಿಸಿರುವುದರಿಂದಲೂ (೧೯), ಗ್ರಂಥಾಂತ್ಯದಲ್ಲಿ ಈ ಗ್ರಂಥವು. "ಗೋಸಣೆ ಮಾಡುವನ್ನಮಿದು **ರಾಯನ ನಾಳ್ಕಳೊಳ್ ಕರ್ಣ** ನಿಚ್ಚಮುಂ" (೩೪೮) ಎಂದು ಹೇಳುವುದರಿಂದಲೂ, ಕನ್ನಡ ಮಾತು ಬಳಕೆಯಲ್ಲಿರುವ ಕನ್ನಡದೇಶವೇ ಈತನ ದೇಶವಾಗಿರಬಹುದು. ಈ ಕವಿಯು ಕ್ರಿ. ಶ. ೧೦ನೆಯ ಶತಮಾನದಲ್ಲಿದ್ದ ರನ್ನನನ್ನೂ, ೧೨ ನೆಯ ಶತಮಾನದಲ್ಲಿದ್ದ ಅಗ್ಗಳನನ್ನೂ, ೧೩ನೆಯ ಶತಮಾನದ ಆದಿ ಯಲ್ಲಿದ್ದ ಕೇಶಿರಾಜನ ಮಾವನಾದ ಜನ್ನನನ್ನೂ (೪) ಹೊಗಳಿರುತ್ತಾನೆ. ಜನ್ನನ ಸಮಕಾಲಿಕನಾದ ಕೇಶಿರಾಜನ ತಂದೆಯಾದ ಮಲ್ಲಿಕಾರ್ಜುನನು ತನ್ನ ಸೂಕ್ತಿಸುಧಾರ್ಣವದಲ್ಲಿ ಈ ಗ್ರಂಥದ ೩೩೭, ೩೩೯, ೩೪೦ನೆಯ ಪದ್ಯಗಳನ್ನು ಉದಾಹರಿಸಿರುತ್ತಾನೆ. ಆದುದರಿಂದ ಈ ಕವಿಯು ೧೩ ನೆಯ ಶತಮಾನದ ಆದಿಯಲ್ಲಿದ್ದಿರಬಹುದು. ಈ ಕವಿಯಿಂದ ಉದ್ದಾಮ ಕವಿಗಳ ಗುಂಪಿನಲ್ಲಿ ಸೇರಿಸಲ್ಪಟ್ಟ ಕಣ್ಣಮಯ್ಯನು ಮಲ್ಲಿಕಾರ್ಜುನನಿ ಗಿಂತ ಆಧುನಿಕನೆಂದು ಮೇ॥ ರೈಸರವರು ಹೇಳುವುದು ಸರಿಯಾಗಿ ಕಾಣುವುದಿಲ್ಲ. ಈತನು ರಚಿಸಿದ ಇತರ ಗ್ರಂಥಗಳೇನೂ ಗೊತ್ತಿಲ್ಲ. ಈತನ ಕವಿತಾಶೈಲಿಯು ಬಹಳ ಸರಳವಾಗಿದೆ. ಈತನು ಪ್ರಯೋ ಗಿಸುವ ಪದಗಳ ಮೈತ್ರಿಯು ಬಹಳ ರಮಣೀಯವಾಗಿದೆ.

**ಗ್ರಂಥಪ್ರಶಸ್ತಿ—**

ಸಂಸ್ಕೃತ ಸಹಾಯವಿಲ್ಲದೆ ಕನ್ನಡದಲ್ಲಿ ಕಾವ್ಯವನ್ನು ರಚಿಸುವುದು ಅಸಾಧ್ಯವೆಂದೂ ಆದುದರಿಂದಲೇ ಪಂಪನೇ ಮೊದಲಾದ ಮಹಾಕವಿಗಳು ಮಿಶ್ರಭಾಷೆಯಲ್ಲಿ ಕಾವ್ಯವನ್ನು ಬರೆದರೆಂದೂ ಕೆಲವರು ಆಕ್ಷೇಪಿಸಿದಂತೆಯೂ, ಅದು ಸಾಧ್ಯವೆಂದು ತೋರಿಸಲು ಈ ಗ್ರಂಥವನ್ನು ಈ ಕವಿಯು ರಚಿಸಿದಂತೆಯೂ ಪ್ರವಾದವಿದೆ.† ಅದರಂತೆಯೇ ಈ ಗ್ರಂಥವು ಸಂಸ್ಕೃತಪದಗಳ ಮಿಶ್ರವಿಲ್ಲದೆ ದೇಶ್ಯಪದಗಳಿಂದಲೂ, ತದ್ಭವ ಪದಗಳಿಂದಲೂ ವಿರಚಿತವಾಗಿದೆ. ಈ ಗ್ರಂಥಕ್ಕೆ "ಕಬ್ಬಿಗರಕಾವ" "ಮದನವಿಜಯ" "ಕಾವನ ಗೆಲ್ಲ" "ಸೊಬಗಿನ ಸುಗ್ಗಿ" ಎಂಬ ಹೆಸರುಗಳುಂಟು. ಇದರಲ್ಲಿ ಮನ್ಮಥನ ವಿಜಯವನ್ನು ವರ್ಣಿಸುವುದರಿಂದ "ಮದನವಿಜಯ" ಅಥವಾ "ಕಾವನ ಗೆಲ್ಲ" ವೆಂದೂ, ಕವಿಗಳ ಮೇಲೆ ಬಂದ ಅಪವಾದವು ಇದರಿಂದ ಹೋದುದರಿಂದ "ಕಬ್ಬಿಗರ ಕಾವ" (ಎಂದರೆ ಕವಿಗಳ ರಕ್ಷಕ) ಎಂದೂ, ಬಹಳ ರಮ್ಯವಾಗಿರುವುದರಿಂದ "ಸೊಬಗಿನ ಸುಗ್ಗಿ" ಎಂದೂ ಹೆಸರು ಬಂದಿರಬಹುದು.

ಉದಯಾದಿತ್ಯಾಲಂಕಾರದಲ್ಲಿ ಹೇಳಿರುವ "ಗದ್ಯದ ಪದ್ಯದ ಮಿಶ್ರದೆ | ಹೃದ್ಯಂ ಚಂಪೂಸಮಾಖ್ಯಕಾವ್ಯಂ"

ಎಂಬ ಲಕ್ಷಣಕ್ಕೆ ಅನುಸಾರವಾಗಿರುವುದರಿಂದ, ಇದು ಚಂಪೂ ಪ್ರಬಂಧ. ಇದರಲ್ಲಿ ಆಶ್ವಾಸ ವಿಭಾಗವಿಲ್ಲ. ಈ ಗ್ರಂಥದ ೩೧೮ನೆಯ ಪದ್ಯವು ಶಬ್ದಾನುಶಾಸನದಲ್ಲಿಯೂ, ೧೪, ೨೨, ೨೪, ೩೫, ೪೨, ೯೮ ನೆಯ ಪದ್ಯಗಳು ಅಭಿನವವಾದಿವಿದ್ಯಾನಂದನ ಕಾವ್ಯಸಾರದಲ್ಲಿಯೂ ಉದಾಹರಿಸಿವೆ.

† ಈಚೆಗೆ ನನಗುಂಟಾಗಿರುವ ಭಿನ್ನಾಭಿಪ್ರಾಯವನ್ನು ೧, ೫, ೧೧ ಪದ್ಯಗಳ ಅರ್ಥವಿವರಣದಲ್ಲಿ ನೋಡಬಹುದು.



# ತೃತೀಯಮುದ್ರಣ—ವಿಮರ್ಶೆ.

ಕವಿಯ ವಿಷಯವಾಗಿಯೂ, ಅವನ ಗ್ರಂಥದ ವಿಷಯವಾಗಿಯೂ ವಿಚಾರವನ್ನು ಮಾಡಲು ಆಂತರ ಮತ್ತು ಬಾಹ್ಯವೆಂಬ ಪ್ರಮಾಣಗಳ ಸಹಾಯವು ಬೇಕು. ಆಂಡಯ್ಯಕವಿಯನ್ನಾಗಲಿ, ಆತನ ಗ್ರಂಥವನ್ನಾಗಲಿ ಕವಿಲೋಕದಲ್ಲಿ ಯಾರೂ ಸ್ಮರಿಸಿಲ್ಲ. ಆಂಡಯ್ಯನು ಇನ್ನಾವ ಕಾವ್ಯವನ್ನು ಬರೆದಿರುವನೋ ಅದ್ಯಾಪಿ ಗೊತ್ತಿಲ್ಲ. ಶಾಸನಗಳಲ್ಲಿ ಎಲ್ಲಿಯೂ ಈತನ ಸಮಾಚಾರವೇ ಬಂದಿಲ್ಲ. ಆದುದರಿಂದ ಬಾಹ್ಯ ಪ್ರಮಾಣವು ಇಲ್ಲದಂತಾಯಿತು. ಆಂತರ ಪ್ರಮಾಣವೊಂದರಿಂದಲೇ ಯಚ್ಚು ಯಾವಚ್ಚು ಈತನ, ಮತ್ತು ಈ ಗ್ರಂಥದ ವಿಚಾರವನ್ನೆಲ್ಲಾ ನಿರ್ಧರಿಸಬೇಕಾಗಿದೆ. ಈತನ ಈ ಗ್ರಂಥದಿಂದ ಅದು ಎಷ್ಟರಮಟ್ಟಿಗೆ ಸಾಧ್ಯವಾಗುತ್ತದೆಯೋ ನೋಡೋಣ.

ಮೊತ್ತಮೊದಲು ಪ್ರಕೃತಗ್ರಂಥದ ನೇಯ್ಗೆಯ ರೀತಿಯನ್ನು ನೋಡೋಣ.

ಈ ಕಾವ್ಯವು "ಕಾವನಗೆಲ್ಲ" ಅಥವಾ "ಮದನವಿಜಯ"ವಾದುದರಿಂದ, ಗ್ರಂಥಾದಿಯಲ್ಲಿ ಕವಿಯು (೧) ಮನ್ಮಥನ ಪ್ರಶಸ್ತಿರೂಪವಾದ ಮಂಗಳವನ್ನು ಮಾಡಿದ್ದಾನೆ. ಅನಂತರ (೨) ತ್ರಿಮೂರ್ತಿಗಳನ್ನು ಸ್ಮರಿಸಿ, (೩) ವಾಙ್ಮಯಕ್ಕೆಲ್ಲಾ ಅಧಿದೇವತೆಯಾದ ಸರಸ್ವತಿಯನ್ನು ಸ್ಮರಿಸಿದ್ದಾನೆ. ಈವರೆಗೆ ಮಂಗಳಾಶಾಸ್ತ್ರಿಯನ್ನು ಮಾಡಿ, ಬಳಿಕ (೪) ತನಗೆ ಆದರ್ಶಪ್ರಾಯರಾದ ಕನ್ನಮಯ್ಯ, ರನ್ನ, ಗಜಗ, ಅಗ್ಗಳ, ಜನ್ನಿಗರನ್ನು ಸ್ಮರಿಸಿ, ಅವರವರ ಗ್ರಂಥಗಳಲ್ಲಿರುವ ಮಹತ್ವಗಳನ್ನು ತನ್ನ ಗ್ರಂಥದಲ್ಲಿ ತರಬೇಕೆಂದು ಆಸೆಪಟ್ಟಿದ್ದಾನೆ. ಅವುಗಳೆಲ್ಲಾ ತನ್ನ ಗ್ರಂಥದಲ್ಲಿ ಉಂಟೆಂದು ತನ್ನ ಈ ಗ್ರಂಥವನ್ನು ಪಠಿಸುವವರಿಗೆ (೫) ಸೂಚನೆಯನ್ನು ಕೊಡುತ್ತಾನೆ.

ಆಮೇಲೆ ೫ ರಿಂದ ೮ ರ ವರೆಗೆ ತನ್ನ ಗ್ರಂಥದ ಪ್ರಶಸ್ತಿಯನ್ನು ತಾನೇ ಹೇಳಿಕೊಂಡಿದ್ದಾನೆ. ೫ ರಲ್ಲಿ ಮುತ್ತಿನ ಎಕ್ಕಸರಕ್ಕೆ ಸಾಮ್ಯವನ್ನು ಹೇಳಿ ಈ ಕಾವ್ಯದಲ್ಲಿ "ಕೊಂಕೂ," "ಬರ್ದುನುಡಿಯೂ," "ಓಜೆಯೂ"[1] ಉಂಟೆಂದು ಹೇಳಿ, ಅರ್ಥಾತ್ ತಾನು ಸ್ಮರಿಸಿದ ಕವಿಗಳ ವಿಶೇಷ ಸಾಮರ್ಥ್ಯಗಳನ್ನು ಈ ಗ್ರಂಥದಲ್ಲಿ ತಂದಿದ್ದೇನೆಂದು ಹೆಮ್ಮೆಪಟ್ಟಿದ್ದಾನೆ. ೬ ರಲ್ಲಿ ಅರ್ಥಗಾಂಭೀರ್ಯವೂ, ಬಂಧಗೌರವವೂ, ಉತ್ತಮಕಾವ್ಯಗಳಲ್ಲಿ ಪರಿಗಣಿಸಲು ಬೇಕಾಗಿರುವ ಕಾವ್ಯಲಕ್ಷಣವೂ ಉಂಟೆಂದು ರತ್ನಕ್ಕೆ ಸಾಮ್ಯವನ್ನು ಹೇಳಿ ಸಕಲರಿಗೂ ಆದರಣೀಯವಾಗದೆ ಹೋಗುವುದಿಲ್ಲ ವೆಂದು ಹೇಳುತ್ತಾನೆ. ೭ ರಲ್ಲಿ "ಕನ್ನಡದೊಳ್ಪಿನ ನುಡಿಗೆ" ತನ್ನ ಗ್ರಂಥವು ದೃಷ್ಟಾಂತವೆಂದು ಹೇಳಿರುವುದಲ್ಲದೆ ಗ್ರಂಥಾಂತ್ಯದ ೩೪೮ ರಲ್ಲಿ "ದೋಸದ ಮಾತು ಪೊರ್ದದೆನೆ ಬಲ್ಲವರಗ್ಗದ ಕನ್ನ ಡಂಗಳಿಂ | ಬಾಸಣವಾಗೆ ಪೇೞ್ದನೊಲವಿಂ ನೆಱೆ ಕಬ್ಬಿಗರೊಪ್ಪೆ ನಾಡೆ ಯುಂ ||" ಎಂದು ಈ ಅಭಿಪ್ರಾಯವನ್ನೇ ಪುನಃ ನಿರ್ಧರಿಸಿ ಹೇಳಿ ದ್ದಾನೆ. ಈವರೆಗೆ ತನ್ನ ಲೇಖಿನಿಯ ಸಾಮರ್ಥ್ಯವನ್ನೂ, ತನ್ನ ಗ್ರಂಥದ ಮಹಿಮೆಯನ್ನೂ ಹೊಗಳಿಕೊಂಡದ್ದಾಯಿತು.

ಆ ಬಳಿಕ ಏತತ್ಗ್ರಂಥಪ್ರತಿಪಾದ್ಯ ಚರಿತ್ರೆಯನ್ನು ಹೇಳಲು ಪ್ರಾರಂಭಿಸಿ, ೯ ರಲ್ಲಿ ತನ್ನ ಪಿತಾಮಹನಾದ ಆಂಡಯ್ಯನ ಸಜ್ಜನಿಕೆ ಯನ್ನು ತಟ್ಟೆಯಲ್ಲಿ ರತ್ನಗಳನ್ನು ಇಟ್ಟು ತೋರಿಸುವಂತೆ ವರ್ಣಿಸಿದ್ದಾನೆ. ಈ ಪದ್ಯದಲ್ಲಿ ಮಹಾತ್ಮಾ ಎಂದು ಹೇಳಿಸಿಕೊಳ್ಳಲು ಇರಬೇಕಾದ ಗುಣ ಗಳೆಲ್ಲವೂ ಆತನಲ್ಲಿ ನಿರೂಪಿತವಾಗಿವೆ. ೧೦, ೧೧ ರಲ್ಲಿ ತನ್ನ ಚಿಕ್ಕ ಪ್ಪಂದಿರು, ತಾಯಿತಂದೆಗಳು ಇವರ ಹೆಸರನ್ನು ಹೇಳಿದ್ದಾನೆ. ಮತ್ತು ತಾನೂ ತನ್ನ ತಾತನ ಹಾಗೆ "ಲೆಕ್ಕಿಗರರಸ"[2] ಎಂದು ಹೇಳಿಕೊಂಡಿ ದ್ದಾನೆ. ಮತ್ತು ೧೨ ರಲ್ಲಿ ಶೃಂಗಾರ ಕಾವ್ಯವನ್ನು ಬರೆಯಲು ತನಗೆ

1, 2 ಈ ಪದಗಳ ಅರ್ಥಕ್ಕೆ ೫ನೆ ಪದ್ಯದ ಟಿಪ್ಪಣಿಯನ್ನು ನೋಡಿ.

ಅರ್ಹತೆಯುಂಟೆಂದೂ, ೧೩ ರಲ್ಲಿ ತನಗೆ ಜಿನಭಕ್ತಿಯುಂಟೆಂದೂ, ಜಿನನಲ್ಲಿ ವಿಶೇಷ ಭಕ್ತಿಯಿಟ್ಟದ್ದರಿಂದ ತನಗೆ ಸಹಜವಾಗಿ ಸಂಪತ್ತು ಬಂದಿತೆಂದೂ ಹೇಳಿಕೊಂಡಿದ್ದಾನೆ.

ಇಲ್ಲಿಯವರೆಗೆ ಕವಿಯು ತನ್ನ ಚರಿತ್ರವನ್ನು ಹೇಳಿ, ಆಮೇಲೆ ೧೪ರಲ್ಲಿ ತನ್ನ ಈಗ್ರಂಥವು ಏತದ್ವಿಷಯಕವೆಂದು ಹೇಳುತ್ತಾನೆ. ಇಲ್ಲಿ ಮನ್ಮಥನ ಪರಿವಾರಗಳಾದ "ಎಳಗಿಳಿವಿಂಡು," "ಮಿಳಿರ್ದಾಡುವ ತುಂಬಿಯ ಬಂಬಲು", "ಕೆಂದಳಿರ್ಗಳ ತೊಂಗಲ್" "ನಡೆನೋಡುವ ಪೆಂಡಿರ ನೋಟಂ", ಮಾಂದ್ಯಶೈತ್ಯಸೌರಭ್ಯಗಳುಳ್ಳ "ತೆಂಬೆಲರ್", "ತಿಂಗಳ ಸಿರಿ" ಇವು ಹೇಗೆ ಜನಗಳ ಮನಸ್ಸನ್ನು ಅಪಹರಿಸುವುವೋ ಹಾಗೆಯೆ ಅವುಗಳ ಬೆಂಬಲವುಳ್ಳ ಕಾವನ, ಕಾಮನ ಎಂದರೆ ಮನ್ಮಥನ ಜಯಪ್ರಶಸ್ತಿರೂಪವಾದ ಕಬ್ಬಂ, ಈ ಕಾವ್ಯವು ಸಮಸ್ತರನ್ನೂ ಆಕರ್ಷಿಸುವುವರಲ್ಲಿ ಸಂದೇಹವಿಲ್ಲವೆಂದು ಹೇಳಿದಂತಾಯಿತು. ಆ ಮೇಲೆ ೧೫, ೧೬ರಲ್ಲಿ ಗ್ರಂಥಾವತಾರಕ್ಕೆ ಕಾರಣವನ್ನು ನಿರೂಪಿಸುತ್ತಾನೆ.

೧೫ರಲ್ಲಿ "ಮುನ್ನಿನ ಪೆಂಪನಾಳ್ದ" ಪಂಪಾದಿಕವಿಗಳು "ಸಕ್ಕದಂ ಬೆರಸಿದಲ್ಲದೆ ಕನ್ನಡದಲ್ಲಿ ಕಬ್ಬಮಂ **ಬಗೆಗೊಳೆ** ಪೇಟಲಾಱರ್" ಎಂದರೆ ಸಂಸ್ಕೃತವನ್ನು ಬೆರಸದೆ ಕಾವ್ಯವನ್ನು ಬರೆಯಬಲ್ಲರು, ಆದರೂ ಆದನ್ನು "**ಬಗೆಗೊಳೆ** ಪೇಟಲಾಱರ್" ಎಂದೂ, "ಅದು ಮಾತನಾಡಿದವೊಲ್" ಎಂದರೆ ಅಷ್ಟು ಸ್ಪಷ್ಟವಾಗಿಯೂ, ಹೃದಯಂಗಮವಾಗಿಯೂ "ಅಂದವನಾಳ್ದಿರೆ" ಸಹೃದಯರನ್ನು ಮೂಗಿನ ಮೇಲೆ ಬೆರಳಿಟ್ಟು ವಿಸ್ಮಯಪಟ್ಟು ತಲೆದೂಗಿಸುವಂತೆ ಬರೆಯಬಲ್ಲ ಕವಿತಾಸಾಮರ್ಥ್ಯವು ಇವನಲ್ಲಿ ಅಲ್ಲದೆ ಇನ್ನಾರಲ್ಲಿಯೂ "ದೊರಕೊಳ್ಳದು" ಎಂದು (೧೬ ರಲ್ಲಿ) "ಬಲ್ಲವರ್"—ಈ ತನ್ನ ಯೋಗ್ಯತೆಯನ್ನು ತಿಳಿದ ಸ್ನೇಹಿತರು ಹೇಳಿದುದನ್ನು ತಾನು ಕೇಳಿ, ಅವರ ಬಯಕೆಯನ್ನು ಸಲಿಸಲು "ಅಚ ಗನ್ನಡಂ ಬಿಗಿವೊಂದಿರೆ **ಕಬ್ಬಿಗರ ಕಾವ**ನೊಲವಿಂದೊರೆದೆಂ"

ಎಂದು ಹೇಳುತ್ತಾನೆ.[1] ಹಿಂದೆ ೪, ೮, ೧೫ರಲ್ಲಿ ಹೇಳಿಕೊಂಡ ಅತಿಶಯ ವನ್ನೆಲ್ಲಾ ಸಂಗ್ರಹಿಸಿ ತಿರಿಗಿ ಹೇಳಿ, ಅವುಗಳನ್ನೆಲ್ಲಾ ಒಳಕೊಳ್ಳುವಂತೆ "ನನೆವಿಲ್ಲ ಬೀರಮಂ" ಮುಂದಕ್ಕೆ ವಿಸ್ತರಿಸಿ "ಪೇಳ್ವೆಂ" ಎಂದು ೧೭ ರಲ್ಲಿ ಹೇಳುತ್ತಾನೆ. ಇಲ್ಲಿಂದ ಮುಂದಕ್ಕೆ ಗ್ರಂಥಪ್ರತಿಪಾದ್ಯವಿಷಯವನ್ನು ಹೇಳತೊಡಗಿದ್ದಾನೆ.

೧೭ರಿಂದ "ಕನ್ನಡಮೆನಿಪ್ಪಾ" ನಾಡಿನ ಸೊಬಗನ್ನು ೨೬ರ ವರೆಗೆ ಹೃದಯಂಗಮವಾಗಿ ವರ್ಣಿಸಿ, ಅವರ ಪ್ರಧಾನಪಟ್ಟಣಕ್ಕೆ "ಪೂವಿನ ಪೊಟಲ್" ಎಂಬ ಹೆಸರು ಬರಲು ಕಾರಣವನ್ನು ಹೇಳಿ, ಆ ಮೇಲೆ ೨೯ರಿಂದ ಆಪೊಳಲನ್ನು ಬಳಸಿದ ವನವನ್ನು ೩೩ರ ವರೆಗೆ ವರ್ಣಿಸಿ, ಆಮೇಲೆ ೩೫ರಲ್ಲಿ ಆವನವನ್ನು ಬಳಸಿದ "ಪೊಂಗೋಂಟೆ" ಯಿಂದೊಳಗೆ ರಾಜಿಸುವ "ರಾಯಬೀದಿ" ಯನ್ನೂ, ೩೬ರಲ್ಲಿ "ರನ್ನವಸರ" ವನ್ನೂ, ೩೭ರಲ್ಲಿ "ಕಂಚುಗಾಱರ ಪಸರ" ವನ್ನೂ, ೩೮ರಲ್ಲಿ "ಸೀರೆವರದರ ಪಸರ"ವನ್ನೂ, ೪೦ರಲ್ಲಿ "ಮಾಲೆಗಾರ್ತಿಯರ ಕೇರಿ" ಯನ್ನೂ, ೪೨-೩ರಲ್ಲಿ ಸೂಳೆಗೇರಿಯನ್ನೂ, ೪೪ ರಲ್ಲಿ ಆಪಟ್ಟಣದ ಸಂಪತ್ಸಮೃದ್ಧಿಯನ್ನೂ ವರ್ಣಿಸಿ ವ್ಯಕ್ತಗೊಳಿಸಿ, ೪೫ರಿಂದ ೫೧ರ ವರೆಗೆ ಆಪೊಳಲಿಗೆ ಅರಸಾದ "ನನೆಯಂಬನ" ಪ್ರತಾಪಾದಿಗಳನ್ನು ವರ್ಣಿಸಿ, ಅನಂತರ ಅವನು ಹೀಗೆ ಅರಸುಗೆಯ್ಯುತ್ತಿರುವಲ್ಲಿ "ಬಂದುದು ಬಸಂತಂ" ಎಂದು ೫೨ ರಲ್ಲಿ ಹೇಳಿ, ವಸಂತಋತುವಿನ ಸೊಬಗನ್ನು ೫೩ರಿಂದ ೬೨ರವರೆಗೆ ವರ್ಣಿಸಿ, ಬಳಿಕ ವಿರಹತಾಪದಿಂದ ಬಳಲಿದ ಸ್ತ್ರೀಯರ ಅವಸ್ಥೆಗಳನ್ನು ೬೩-೭೧ ರ ವರೆಗೆ ಮಾಡಿರುವನು. ಆವಸಂತಋತುವಿನಲ್ಲಿ ನನೆಯಂಬನು ತನ್ನ ಕೆಳೆಯನಾದ ನಗೆಗಾರನನ್ನು ಬರಿಸಿ, ತಾನು ಕನಸಿನಲ್ಲಿ ಕಂಡ ಒಬ್ಬ ಅಪ್ಸರಸ್ತ್ರೀಯನ್ನು ೭೩ ರಿಂದ ೮೦ರ ತನಕ ವರ್ಣಿಸಿ ಹೇಳುವನು. ಅದಕ್ಕೆ ನಗೆಗಾರನು "ಕನಸಿದು ನನ್ನಿ, ನಿನಗೆ ಒಬ್ಬ ಕನ್ನೆ

---

1. ಈ ಪದ್ಯದ ಅರ್ಥವನ್ನು ಮುಂದೆ ವಿಚಾರಮಾಡಿರುತ್ತೇನೆ.

ಬೇಗದೆ ಸಾರ್ವಳು " ಎಂದು ಹೇಳಿ, ಸುತ್ತಲೂ ಗೋಡೆಯ ಮೇಲೆ ಚಿತ್ರಿಸಿದ್ದ ವನವನ್ನು ನೋಡುತ್ತಿದ್ದ ರಾಜನನ್ನು ಕುರಿತು " ಇದು ಹಾಗಿರಲಿ, ಎದುರಿಗಿರುವ ವನದ ಸೊಗಸನ್ನು ನೋಡು (೮೫) ಎಂದು ಹೇಳುತ್ತಿರುವಲ್ಲಿ, ಒಬ್ಬ ತೋಟಗಾರನು ಆವನದ ಸೊಂಪನ್ನುಬೀರುವ ವಸ್ತುಗಳನ್ನು ಕಾಣಿಕೆಗೊಟ್ಟು " ವಿನೋದಕ್ಕೆ ಪಕ್ಕಾದ ಬನಮಂ ನೋಡಲ್ವೇಳ್ಕು " ಮೆಂದು ವಿಜ್ಞಾಪಿಸಲು, (೯೧) ನನೆಯಂಬನು ಹೊರಡುವನು. (೯೨) ಪೆಂಡಿರ ತಂಡವೂ, (೯೩) ಚೆನ್ನೆಯರೂ, (೯೫) ಬಿಂಕಗಾರ್ತಿಯರೂ, (೯೬) ಚೆಲ್ಲಗಾರ್ತಿಯರೂ, ಆವನ ಹಿಂದೆ ಹೊರಡುವರು. (೯೮) ತಣ್ಗಾಳಿಯ ವರ್ಣನೆ. ನಗೆಗಾರನು ಮಲ್ಲಿಗೆ, ಎಳಗೌಂಗು, ದಾಳಿಂಬ, ತಾವರೆಗೊಳ, ಬಳ್ಳಿಮಾವು, ಕೊಸಗು, ಸಂಪಗೆ, ಇರವಂತಿ ಇತ್ಯಾದಿಗಳ ವರ್ಣನೆಯಿಂದ ಆ ವನವು ಪಟ್ಟಣದಂತಿರುವುದೆಂದು ನಿರೂಪಿಸುತ್ತಾ ತೆರಳುತ್ತಿರುವಲ್ಲಿ—ಒಂದು ಮಾವಿನ ಮರದ (ಅದರ ವರ್ಣನೆ ೧೧೧ ರಲ್ಲಿ) ಕೆಳಗೆ ನಿಂತಿದ್ದ ಒಬ್ಬ ಸುಂದರಿಯನ್ನು ಕಾಣುವನು. ಅವಳ ವರ್ಣನೆ (೧೧೨). ಅವಳು ತಾನು " ಸಗ್ಗದಾಕೆ, " ಎಂದು ಹೇಳಿದನಂತರ ನನೆಯಂಬನು ಹತ್ತಿರ ಹೋಗಿ, " ನೀವು ಯಾರು ? " ಎಂದು ಕೇಳಿದುದಕ್ಕೆ ತಾನು ಅಪ್ಸರಸ್ತ್ರೀ, ಈ ವನವನ್ನು ನೋಡಲು ಬಂದವಳು ಎಂದು ಹೇಳಲು ; ಅದಕ್ಕೆ ತಾನು ಹಿಂದೆ ಈ ತೋಟವನ್ನು ನೋಡಿದ್ದ ಹಾಗೆ ಇದೆ, ಆ ವಿಚಾರವನ್ನು ತಿಳಿದಿದ್ದರೆ " ನೀಮೆನಗೆ ಪೇಳ್ವುದು " ಎಂದು (೧೧೬) ಕೇಳಲು ; ಅವಳು ಒಂದು ಕಥೆಯನ್ನು ಹೇಳಲು ತೊಡಗುವಳು.

ಆ ಕಥೆ ಏನೆಂದರೆ :—

ಕಂಪಿನ ಪೊಳಲೆಂಬ ಬೀಡಿನ ವರ್ಣನೆ (೧೧೮). ಕರ್ವುವಿಲ್ಲನು ನೆಲನನಿತಂ ಗೆಲ್ದು ಅದನ್ನು ಆಳುವನು (೧೧೯). ಆತನ ನಚ್ಚಿನ ಪೆಂಡತಿಯಾದ ಇಚ್ಚೆಗಾರ್ತಿಯ ವರ್ಣನೆ (೧೨೦). ಅವರಿರ್ವರ ಅನುರಾಗ, ವಿಹಾರ (೧೨೦-೧೨೫) ಅವರ ಓಲಗಸಾಲೆ (೧೨೬-೧೨೯), ಜೊನ್ನಮ

ನುಣ್ಬ ಪಕ್ಕಿಯೆಂಬ ದೂತಿಯ ವರ್ಣನೆ (೧೩೦) ಅವಳು ಬಂದುದನ್ನು ತೆಂಬೆಲರ್ ಅರಿಕೆಮಾಡಿ ಒಡಗೊಂಡು ಸನ್ನಿಧಾನಕ್ಕೆ ಬರುವನು (೧೩೧). ಕಾವನ ಓಲಗದಲ್ಲಿ ಇದ್ದ ಎಳವೆಂಡಿರ್, ಸಜುಮಿಂಡಿಯರ್, ಬರ್ದೆಯರ್ ಇವರ ವರ್ಣನೆ (೧೩೨-೧೩೪) "ನೋಟ್ಪರ ಕಣ್ಗೆ ನೆಲೆವೀಡಾದ ನನೆ ವಿಲ್ಲ ಬಲ್ಲಹನ" ಸೊಂಪಿನ ವರ್ಣನೆ (೧೩೬-೧೪೨). ಆ ಸೊಂಪಿಗೆ ಬೆಕ್ಕಸವಷ್ಟು ಇಂಗದಿರ್ಗಳಂ ಕಾಣ್ಕೆಗೊಟ್ಟು ಜೊನ್ನವಕ್ಕಿಯು ಸ್ತುತಿಸಿ "ಸಿವನೆಂಬ ದುಟ್ಟಗೊರವನ" ದೌಷ್ಟ್ಯವನ್ನು ವರ್ಣಿಸಿ, ಆ ಸಿವನು (೧೪೩-೮), "ಸೆಱೆಯಂ ಬಾಳ್ದಲೆವಿಡಿದಂ, ಅದಕ್ಕೆತಕ್ಕುದಂ ನಿಮ್ಮಡಿಗಳೆ ಬಲ್ಲಿ" ರೆಂದು ಬಿನ್ನವಿಸಲು ; ಕಾವನ ಮುನಸಿನ ವರ್ಣನೆ (೧೫೦-೬). ಆಗ ಕೆಲದೊಳಿದ್ದ ಬಸಂತನು ಹೇಳಿದ ಮಾತು (೧೫೬-೯). ಆ ಮಾತನ್ನು ಮನ್ನಿಸಿ, **ತೆಂಗಾಳಿ**ಯೆಂಬ ದೂತನಂ ಕರೆಸಿ, ನೀನು "ಗೊರವನಲ್ಲಿಗೆ ಪೋಗಿ ನಮ್ಮ ಸೆಱೆಯಂ ಬಿಡಿಸಿಕೊಂಡು ಬಾ" ಎಂದು ಹೇಳಿಕಳುಹಿಸುವನು. ಶಿವನ ಓಲಗದ ವರ್ಣನೆ (೧೬೧-೮). ಶಿವನ ಆಸ್ಥಾನದಲ್ಲಿದ್ದ ಬೀರಗಣೇಸರು (೧೬೧) ಜತಿಗಳು, (೧೬೨), ಇಂದ್ರ (೧೬೩), ಬಿದಿ (೧೬೪), ಸಿರಿಯರಸ (೧೬೫), ಇವರ ವರ್ಣನೆಗಳು.† ಅವರ ನಡುವಿದ್ದ ಕಱೆಗೊರಲನ ವರ್ಣನೆ (೧೬೭-೮). ತೆಂಗಾಳಿಯೆಂಬ ದೂತನು ಶಿವನಲ್ಲಿ ಹೋಗಿ "ನಮ್ಮ ನನೆವಿಲ್ಲ ಬಲ್ಲ ಹನು ನಿಮ್ಮ ಕೆಳೆತನಮಂ ಬಳೆಯಿಸಲು ಇಚ್ಛಿಸುವನು" ಎಂದು ಹೇಳಿ, ಅವನ "ಬಲ್ಪನ್ನು" ಹೊಗಳುವನು (೧೭೦-೫). "ನೀಮಿರ್ವರುಂ ನಲ್ಪಗೆಗೊಂಡೊಡೆ ಪೊನ್ನದು ಕಮ್ಮಿತಾದ ತೆಱಂ" ಎಂದು ನಿರೂಪಿಸಿ, "ಸೆಱೆಯ ಸೆಱೆಯಂ ಬಿಡುವುದು ಲೇಸು" ಎನ್ನಲು ; ಮಾದೇವನು ಕಾವನ ಪರಾಕ್ರಮವನ್ನು ಹೀಯಾಳಿಸುವನು* (೧೭೯-೧೮೪), ಅದಕ್ಕೆ

---

† ಪುರಾಣಗಳಲ್ಲಿ ವಿಷ್ಣುಲೋಕದಲ್ಲಿ ಶಿವಾದಿಗಳು, ಇಂದ್ರಲೋಕದಲ್ಲಿ ವಿಷ್ಣ್ವಾದಿಗಳು ಇರುವರೆಂದು ವರ್ಣಿಸುವಂತೆ ಶಿವಲೋಕದಲ್ಲಿ ವಿಷ್ಣ್ವಾದಿಗಳು ಇದ್ದರೆಂದು ಕವಿಯು ವರ್ಣಿಸಿದ್ದಾನೆ.

ದೂತನ ಉತ್ತರ (೧೮೫-೧೮೭)* “ ಶಿವನು ಕಾಳಿಗವನ್ನು ಮುಂದಿಟ್ಟು ಕೊಂಡು ಇದ್ದಾನೆ” ಎಂಬ ತೆಂಗಾಳಿಯ ಮಾತನ್ನು ಕೇಳಿ, ಕಾಮನು “ ಮುಳಿಸಂ ಮುಕ್ಕುಳಿಸಿ ” ತನ್ನ ಪರಾಕ್ರಮವನ್ನು ಒದರಿ (೧೮೯ ರಿಂದ ೧೯೨), ಗದ್ದುಗೆವೊಯ್ದು ಅಟ್ಟಹಾಸಮಾಡಿ (೧೯೪-೫); ಪಡೆಯೆಲ್ಲವೂ ಸನ್ನಾಹದಿಂದ ಬರಲಿ ಎಂದು **ಬಸಂತಮಲ್ಲೆಲರ್ಗಳಿಗೆ** ಆಜ್ಞೆಮಾಡಿ, ತಾನೂ ವೀರಪಸದನಂಗೆಯ್ದು ಯುದ್ಧಸನ್ನದ್ಧನಾಗಿ ಪಡೆವೆರಸು ಅರಮನೆಯಿಂದ ಹೊರಡುವನು. ಬಸಂತನು ಕಾಮನಿಗೆ ಸೇನೆಯ ಸಂವರಣೆಯನ್ನು ತೋರಿಸುವನು (೨೦೧). ಕಾಮನ ಪುಸಿವಡೆಯಲ್ಲಿದ್ದ ಆನೆ, ಕುದುರೆ, ತೇರು, ತುಳಿಲಾಳ್—ಇವರ ವರ್ಣನೆ(೨೦೩-೬). ಕರ್ಬುವಿಲ್ಲನ ಪೆರ್ಬಡೆ (೨೦೭-೨೧೬)† ಕಾಮನು ತನ್ನ ಪಡೆವೆರಸು “ ನಿಚ್ಚವಯಣಂ ಬರುತಿರ್ಪಾಗಳ್” ಸಂದಿಸಿದ ಬೇಡವೆಂಡಿರಿಂದ ನೆರೆದ ಕಾಡನ್ನು ಪಿಂದಿಕ್ಕಿ ಮುಂದೆ ಹೋಗುತ್ತಿರುವಲ್ಲ, ಅಲ್ಲಿ ಅರುಹಂತನೇಚ್ಚ್ಗಯನ್ನು ಪಾಡುತ್ತಿರುವ ಸಗ್ಗದ ಪೆಂಡಿರ ನುಣ್ಚುರಕ್ಕೆ ಎಳವುಲ್ಲೆಗಳು ಆಲಿಸುತ್ತ ಮನೋಹರವಾಗಿರುವ ತಪ್ಪಲುಳ್ಳ ಬೆಟ್ಟವು ಎದುರಿಗೆ ಕಾಣಿಸುವುದು. ಬಸಂತನು ಅಲ್ಲಿರುವ ಜತಿಗಳ ಮಹಿಮೆಯನ್ನು ವರ್ಣಿಸುವನು (೨೨೩-೫). ಅಲ್ಲಿ ತಪಸ್ಸಿಗೊಳಗಾದ ತಪಸ್ವಿಗಳಲ್ಲಿ ಒಬ್ಬ ಸವಣನ ವರ್ಣನೆ (೨೨೭). ಕಾಮನು ಕಿಡಿಕಿಡಿವೋಗಿ “ ಎನಗಿದಿರಾಗಿ ನಿಲ್ವ ತವಸಿಗಳೊರ್ವ್ವರಂ ಕನಸಿನೊಳಂ ಕಂಡೆನಿಲ್ಲ. ಇವನಿಗೆ ತಕ್ಕುದಂ ಮಾಡುವೆನೆಂದು” ಕರ್ವುವಿಲ್ಗೆ ಕೈಯಂ ನೀಡಲು, ಅವನನ್ನು ಮಾರ್ಕೊಂಡು ಬಸಂತನು ಧರ್ಮೋ

---

* ಈ ಭಾಗದಲ್ಲಿ ಕವಿಯ ಪ್ರತಿಭೆಯ ಮಹತ್ವವನ್ನು ಕಾಣಬಹುದು. ೧೮೩ ರಲ್ಲಿ ಚಂದ್ರನನ್ನು ಸೆರೆಯಲ್ಲಿಟ್ಟುಕೊಂಡಿದ್ದ ಶಿವನು ಕಾಮನ “ ಬೆಳ್ಗೊಡೆಯಾಗಸಕೆಳ್ದ ಚಂದವಂ ಗಡ ” ಎಂದು ಹೇಳಿರುವುದು ಕಥಾಸಂದರ್ಭಕ್ಕೆ ಅನುಚಿತವೆಂದು ತೋರುತ್ತದೆ.

† ಕಾಮನ ಪೆರ್ಬಡೆಯ ವರ್ಣನೆಯು ಸಹೃದಯರ ಹೃದಯನಾಡಿಯನ್ನು ಅಲ್ಲಾಡಿಸದೆ ಬಿಡದು.

ಪದೇಶ ಮಾಡುವನು. (೨೨೯-೩೧) ಅವನ ಉಪದೇಶವನ್ನು ಕೇಳಿ ಕಾವನು ಗಡಗಡನೆ ನಡುಗಿ, ಆಡಿದ ಮಾತು (೨೩೩)[1] ಮುಂದಣ ಕಾಡಿನ ಹೃದ್ಯವಾದ ವರ್ಣನೆ (೨೩೪). ಕಾವನು ರನ್ನಗಲ್ಲೆಂಬ ಬೆಟ್ಟ ವನ್ನು ಕಾಣುವನು. ಅದರ ವರ್ಣನೆ (೨೩೫-೭) ಆ ಬೆಟ್ಟದ ವನಗಳಲ್ಲಿ ಬೀಡನ್ನು ಬಿಡುವನು (೨೩೮). ಬಿಟ್ಟ ಬೀಡಿನ ವರ್ಣನೆ (೨೩೮). ಇದನ್ನು ಕೇಳಿ ಶಿವನು ವೀರಭದ್ರನಿಗೆ ಕಾವನನ್ನು ತಾಗುವಂತೆ ಹೇಳಲು, ಅವನ ವೀರವಾದ (೨೪೦), ಮತ್ತೊಬ್ಬ ಕೂರಾಳಿನ ವೀರವಾದ (೨೪೧) ಮತ್ತೊಬ್ಬನ ವೀರವಾದ(೨೪೨) ಇತರ ವೀರರ ವೀರವಾದಗಳು (೨೪೩-೨೪೬) ಆಗ "ಕಾವನ ಕಡುಗುದುರೆ ಪೊಲದಲ್ಲಿ ನಿಂದವರಂ ತಿವಿದುದು" ಎಂದು ಹೊಯ್ಲಾಗುವುದು (೨೪೭). ಆ ಪಡೆಯನ್ನು ತಾಗಲು ಶಿವನು ಒಂದು ಪುಸಿವಡೆಯನ್ನು ನಿರ್ಮಿಸುವನು (೨೪೯). ಆ ಪುಸಿವಡೆಯೊಡ ಗೂಡಿ **ಬೀರನು** ಮಂಜುವೆಟ್ಟದಿಂ ಹೊರಡುವನು. (೨೫೦). ಶಿವನ ಸೇನೆಯ ವರ್ಣನೆ. (೨೫೧-೨೬೪)[2] ಪಡೆಗಳೆರಡೂ ತಾಗುವುವು (೨೬೫). ಮುಂದಕ್ಕೆ ೨೬೬ ರಿಂದ ೨೮೪ ರ ವರೆಗೆ ಯುದ್ಧವರ್ಣನೆ. ರಣರಂಗ ದಲ್ಲಿ ರಕ್ಕಸಿಯರು (೨೮೫). ಸನೆವಿಲ್ಲನು "ಮಾಜಣಿಯನ್ನು" ತೋ ಳ್ಬಲದಿಂದ ಹಿಂದಕ್ಕೆ ಓಡಿಸಿ, ಸೇನೆಯೊಡನೆ ವೇಗವಾಗಿ ಬಂದು ಮಂ ಜುವೆಟ್ಟವನ್ನು ಮೂವಳಸಾಗಿ ಮುತ್ತುವನು.[3] (೨೮೮) ನನೆವಿಲ್ಲಾ ತನ ಮತ್ತು ಮುಕ್ಕಣ್ಣನ ಬಲಾಬಲವನ್ನು ನೋಡಲು ಮುಗಿಲೊಡ್ಡಿನ ಕೆಲದಲ್ಲಿ ದೇವತೆಗಳು ಬಂದು ನಿಲ್ಲುವರು (೨೮೯). ಕಾವನ ತೋಳ್ಬ ಲವನ್ನು ತಿಳಿವೆವೆಂದು ಬಿಸುಗಣ್ಗೊರವನೂ, (೨೯೦) ಪಲಗಣ್ಣನಾದ

---

1. ಇಂದ್ರಿಯಜಯವನ್ನು ಮಾಡಿರುವ ತಪಸ್ವಿಗಳ ಮೇಲೆ ಮನ್ಮಥನ ಆಟೋಪವು ಕೆಂದದು, ಏಕೆ? ಅವರು ಆಶಾಪಾಶವನ್ನು ಕಿತ್ತಿಟ್ಟಿರುವರಲ್ಲವೆ?

ಇಲ್ಲಿ ಕವಿಯು ಸವಣನ ಮಹತ್ವವನ್ನು ವರ್ಣಿಸಿರುವ ರೀತಿಯು ಆಶ್ಚರ್ಯಕರ ವಾಗಿದೆ.

1, 2, 3, ಈ ವರ್ಣನೆಯಲ್ಲಿ ಕವಿಸಾಮರ್ಥ್ಯದ ಮಹತ್ವವನ್ನು ಕಾಣಬಹುದು.

ಇಂದ್ರನೂ (೨೯೧) ಸಿರಿವೆಣ್ಣರಸಾದ ವಿಷ್ಣುವೂ, (೨೯೨) ಸರಸತಿವರನಾದ ಬೊಮ್ಮನೂ (೨೯೩), ಬಂದಿರುವರು. ತನ್ನ ಸೇನೆಯೆಲ್ಲಾ ಕೆಟ್ಟು ಓಡಿಹೋದರೂ ಬಗೆಯದೆಯೂ ತನ್ನ ಬೆಳ್ಳಿಯ ಬೆಟ್ಟವನ್ನು ಬಿಡದೆಯೂ ಶಿವನೊಬ್ಬನೇ ನಿಲ್ಲುವನು (೨೯೬). ಆಗ ನನೆವಿಲ್ಲ ಬಲ್ಲಹನು ಶಿವನನ್ನು ಮೂದಲಿಸಿ, "ಇನ್ನಾದರೂ ಎಳವೆಱೆಯಂ ಬಿಟ್ಟುಬಾಳು" ಎಂದು ನುಡಿದು, ಜೋವೊಡೆದು, (ಅದರ ವರ್ಣನೆ ೩೦೦) ಅಲರ್ಗಣೆಗಳನ್ನು ಬಿಡುವನು. ಆ ಪೂಗೋಲ್ಗಳು ಬಂದು ಮುತ್ತುವ ಹೃದ್ಯವಾದ ವರ್ಣನಾ ವೈಖರಿ (೩೦೨-೩೦೭). ಆ ಅಂಬುಗಳು ಶಿವನನ್ನು ತಾಗಲು, ಶಿವನು **ಅರೆವೆಣ್ಣಾಗುವನು** (೩೦೮). ಆಗ ದೇವತೆಗಳು ಕಾವನ ಮೇಲೆ ಮುಗುಳ ಮಳೆಯನ್ನು ಕರೆವರು. ಶಿವನು ಕೋಪಗೊಳ್ಳುವನು. ಶಿವನ ಕೋಪೋದ್ರೇಕದ ಅನುಭಾವ (೩೧೦). ಕಾವನ ಪರಿವಾರವೆಲ್ಲವೂ ನಡುಗಿ ಹೋಗುವಂತೆ, ಶಿವನು ಕನಲ್ದು, "ಮುಂದೆ ನಿಂದು ಪಿರಿಯರೆಂಬುದಂ ಬಗೆಯದೆ, ಉರ್ಕಿಂದೆನ್ನೊಳ್ ಕಾದಿದೆ. ಅದಱಿಂ ನಿನ್ನೊಪ್ಪಳಂ ಕೂಡದೆ ಪೆಱರಱಿಯದಂತೆ ಎಲ್ಲಿಯಾದೊಡಮಿರ್ದು ಕಾವನೆಂಬುದಂ ಮಱೆದಿರ್" ಎಂದು ಶಪಿಸುವನು (೩೧೨). **ನೆಲೆವೀಡಿನಲ್ಲಿ** ಎಂದರೆ ಕಂಪಿನ ಪೊಳಲಲ್ಲಿದ್ದ ಇಚ್ಚೆಗಾರ್ತಿಯು ಬಸಂತನ ಮೂಲಕ ಈ ಸಮಾಚಾರವನ್ನು ಕೇಳಿ ಮೂರ್ಛೆ ಹೋಗುವಳು. ಅವಳ ಹೃದ್ಯವಾದ, ವಿರಹವರ್ಣನೆ (೩೧೩-೩೧೮).

ಇಷ್ಟುವರೆಗೆ ಆ ಅಪ್ಸರಸ್ತ್ರೀಯು ಕಥೆಯನ್ನು ಹೇಳಿ ಮುಗಿಸಿ ಆಮೇಲೆ "ಶಿವನ ಸಾಪಂದಳೆದು ಬಂದ ನೀನು ಈ ಪೊೞಲಲ್ಲಿ ನನೆಯಂಬನೆಂಬರಸಾದೆ. ನಿನ್ನ ಶಾಪವು ಈಗ ತೀರಿತು. ಈ ತೋಟದಲ್ಲಿರುವ ಬಾಳೆ ಮೊದಲಾದುವೆಲ್ಲಾ ನಿನ್ನ ಸೈನ್ಯವು" ಎಂದು ಹೇಳಿ, ಹಾರಿಹೋಗುವಳು (೨೧೯).

ಅಲ್ಲಿದ್ದ ಒಂದು ಗಿಳಿಯು ಬೇಗ ಹೋಗಿ ಬಸಂತನಿಗೆ ಈ ಸುದ್ದಿಯನ್ನು ತಿಳಿಸುವುದು (೩೨೦). ಅದನ್ನು ಬಸಂತನು ತಳಿರ್ವನೆಯಲ್ಲಿ ನಲ್ಲ

ನನ್ನು ನೆನೆದು ಚಿಂತಿಸುತ್ತಿದ್ದ ಇಚ್ಛೆಗಾರ್ತಿಗೆ ಈ ಸಮಾಚಾರವನ್ನು ತಿಳಿಸಿ (೩೨೧), ಮುಕ್ಕಣ್ಣನನ್ನು ಗೆದ್ದ ನಮ್ಮೊಡೆಯನು ಬರುವನು ಎಂದು ನಿಸ್ಸಾಳವನ್ನು ಹೊಡೆಯಿಸಲು, ಇಚ್ಛೆಗಾರ್ತಿಯು ಚೆನ್ನೆಯರ್ವೆರಸು ಬಸಂತನೊಡಗೂಡಿ ಕಾಮನನ್ನು ಇದಿರ್ಗೊಳ್ಳುವಳು (೩೨೪). ಇಚ್ಛೆಗಾರ್ತಿಯ ದೃಷ್ಟಿಸಂಯೋಗದ ವರ್ಣನೆ (೩೨೮-೩೩೧) ಈ ವರ್ಣನೆಯಲ್ಲಿ ವ್ಯಂಗ್ಯಮರ್ಯ್ಯಾದೆಯಿಂದ ಕಾಮನ ಅವಯವ ಸೌಷ್ಟವ ಸೌಂದರ್ಯಗಳನ್ನೂ ಲೋಕಮರ್ಯ್ಯಾದೆಯನ್ನೂ ನಿರೂಪಿಸಿ ತನ್ನ ಕವಿತಾಸಾಮರ್ಥ್ಯದ ಪರಾಕಾಷ್ಠೆಯನ್ನು ತೋರಿಸಿರುವನು. ಪತಿಪತ್ನಿಯರ ದೃಷ್ಟಿಸಂಯೋಗ ವರ್ಣನೆ (೩೩೨). ಬಸಂತನೇ ಮುಂತಾದವರಿಂದ ಕಾಣಿಕೆಗಳನ್ನು ಸ್ವೀಕರಿಸಿ, ಪತ್ನಿಯೊಡನೆ ಮಾವೆಂಬ ಆನೆಯನ್ನೇರಿ, ತನ್ನ ಪೊಳಲನ್ನು ಪೊಕ್ಕು ಬೀದಿಗೊಂಡು ಬರುವಲ್ಲಿ ನಗರದ ನಾರಿಯರು ಮಾಡಗಳಲ್ಲಿ ನಿಂದು ರತಿಕಾಮರ ಮೆರವಣಿಗೆಯನ್ನು ನೋಡುವರು. ಅವರ ಅನುಭಾವಾದಿಗಳ ವರ್ಣನೆ (೩೩೪-೩೪೦) ಆ ಮೇಲೆ ಕರುಮಾಡದ ಮುಂದಣ ಓಲಗಸಾಲೆಯಲ್ಲಿ ಕಾಮನು ರತಿವೆರಸು ಕುಳಿತುಕೊಳ್ಳುವಲ್ಲಿ (೩೪೧), ನೀರೆಯರು ಮುತ್ತಿನ ಸೇಸೆಯನ್ನು ಇಕ್ಕುವರು (೩೪೨), ಆರತಿಯೆತ್ತುವರು (೩೪೩). ಅನಂತರ ಕಾಮನೂ ಬಸಂತನೂ ಕಾಲವನ್ನು ಕಳೆಯುತ್ತಿದ್ದ ಪ್ರಕಾರವನ್ನು ಹೃದ್ಯವಾಗಿ (೩೪೪) ನಿರೂಪಿಸಿ, ಗ್ರಂಥವನ್ನು ಪೂರೈಸುವನು. (೩೪೫).

ಆ ಮೇಲೆ ೩೪೬ ರಿಂದ ೩೪೯ ರವರೆಗೆ ಈ ಗ್ರಂಥದಲ್ಲಿ ಬರಬೇಕೆಂದು ತಾನು ಮೊದಲು ಸಂಕಲ್ಪಿಸಿದ್ದ ಅತಿಶಯವೆಲ್ಲವನ್ನೂ ಕ್ರೋಢೀಕರಿಸಿ ಹೇಳಿ, ಅವುಗಳೆಲ್ಲವೂ ಇದರಲ್ಲುಂಟೆಂದು ನಿರ್ಧರಿಸಿ ನಿರೂಪಿಸಿರುವನು. ೩೪೬ರಲ್ಲಿ ಅರ್ಥಗಾಂಭೀರ್ಯವೂ, ಉತ್ತಮ ಕಾವ್ಯಲಕ್ಷಣವೂ (ವ್ಯಂಗ್ಯ, ಉಪಮೋತ್ಪ್ರೇಕ್ಷಾದಿಗಳು), ಬಂಧಗೌರವವೂ (ಶಬ್ದಗುಣ, ಅರ್ಥಗುಣ) ಈ ಕಾವ್ಯದಲ್ಲಿ ಇದ್ದು ಸಹೃದಯರನ್ನು ಮೋಹಗೊಳಿಸಿದುದ

ರಿಂದ, ಅವರು ಶ್ಲಾಘಿಸಿ, ಇದಕ್ಕೆ "ಸೊಬಗಿನ ಸುಗ್ಗಿ" (ಎಂದರೆ ಸುಗ್ಗಿ ಯಕಾಲದಲ್ಲಿ ಧಾನ್ಯಸಮೃದ್ಧಿಯನ್ನು ಕಾಣುವಂತೆ ಈ ಗ್ರಂಥದಲ್ಲಿ ಕವಿತಾವನಿತೆಯ ಸೌಂದರ್ಯಾದಿಗಳ ಸಮೃದ್ಧಿಯನ್ನು ಕಾಣಬಹುದಾದುದರಿಂದ) ಈ ಗ್ರಂಥಕ್ಕೆ ,, ಸೊಬಗಿನ ಸುಗ್ಗಿ " ಎಂಬ ಹೆಸರನ್ನು ಕೊಟ್ಟರೆಂದೂ, ೩೪೭ ರಲ್ಲಿ ಈಶ್ವರನ ತಲೆಯಲ್ಲಿ ಪೆಣ್ಣೆಯೂ, ಅರೆಮೆಯ್ಯಲ್ಲಿ ಪಾರ್ವತಿಯೂ ಇರುವ ಸಹಜಸ್ಥಿತಿಯನ್ನಾಲೋಚಿಸಿ, ಪುರಾಣಾದಿಗಳಲ್ಲಿ ಯಾವ ಆಧಾರವೂ ಸಿಕ್ಕದ ರೀತಿಯಲ್ಲಿ ಒಂದು ಹೊಸ ಕಥೆಯನ್ನು ಕಲ್ಪನೆಮಾಡಿ ಮದನವಿಜಯವನ್ನು ಹೇಗೆ ನಿರೂಪಿಸಿರುವನೊ ! ಎಂಬ ಬಲವು-ಆನಂದವು ಹೃದಯವನ್ನು ವ್ಯಾಪಿಸಲು ಪರವಶರಾಗಿ, ಸಂಸ್ಕೃತಜ್ಞರು ಇದಕ್ಕೆ ,, ಮದನವಿಜಯ " ವೆಂಬ ಹೆಸರು ಅತ್ಯತಿಶಯವಾಗಿ ಸಲ್ಲುವುದೆಂದು ಆ ಹೆಸರನ್ನು ಕೊಟ್ಟರೆಂದೂ, (೩೪೮) ರಲ್ಲಿ ,, ಬಲ್ಲವರು " ಈ ಗ್ರಂಥವಿಚಾರವಾಗಿ ,, ದೋಸದ ಮಾತು ಪೊರ್ದದು " ಎಂದು ಹೇಳುವಹಾಗೆಯೂ, ಕಬ್ಬಿಗರು ಒಲವಿಂ (ಪ್ರೀತಿಸಿ) ಒಪ್ಪುವ ಹಾಗೆಯೂ, ಕನ್ನಡ ಶಬ್ದಗಳಿಂದ ,, ಬಾಸಣವಾಗೆ" ,, ಮಾತನಾಡಿದ ವೋಲ್ " ಆಗುವಂತೆ ಈ ಗ್ರಂಥವನ್ನು ರಚಿಸಿದನೆಂದೂ ಹೇಳುವನು. ಮತ್ತು " ಗೋಸಣೆ ಮಾಡುವನ್ನಂ" ಬಹು ಪ್ರಸಿದ್ಧಿವಡೆದು, ಕನ್ನಡ ಭಾಷೆಯು ನಡೆಯಾಡುವ ಕನ್ನಡದೇಶದ ರಾಯನ ಎಂದರೆ (ಏಕವದ್ಭಾವಮಾಡಿ) ಅರಸರ ನಾಡುಗಳಲ್ಲ, ,, ದೇಸೆಯ ಗೊತ್ತು, ಜಾಣ್ಣುಡಿಯ ತಾಯ್ವನೆ," ,, ಮಣ್ಬೊರುಳೀಟ್ಗೆ " ಎಂಬ ಯಶಸ್ಸನ್ನು ಪಡೆದು ಶಾಶ್ವತವಾಗಿ ನಿಲ್ಲಲಿ! ಎಂದು ಹಾರೈಸುವನು. ೩೪೯ ರಲ್ಲಿ ಕವಿಯು ಜೈನಮತಪ್ರವಿಷ್ಟನಾದುದರಿಂದ ಅರುಹಂತನ ಮಾಹಾತ್ಮ್ಯ ಸೂಚಕವಾದ ವಿಶೇಷಣಗಳನ್ನು ಹೇಳಿ, ಆತನು ಜಿನಧರ್ಮಾವಲಂಬಿಗಳಿಗೆ ಭೂಮಿಯೂ ಸಮುದ್ರವೂ ಇರುವವರೆಗೆ ಇಷ್ಟಾರ್ಥವನ್ನು ಕೊಡಲಿ! ಎಂದು ಮಂಗಳಾಚರಣವನ್ನು ಮಾಡಿ ಗ್ರಂಥಪರಿಸಮಾಪ್ತಿಯನ್ನು ಮಾಡುವನು.

ಗ್ರಂಥಾತ್ಯ ಗದ್ಯದಲ್ಲಿ ಈ ಗ್ರಂಥಕ್ಕೆ ,,ಕಾವನ ಗೆಲ್ಲ" ವೆಂಬ ಹೆಸರೇ ತನ್ನ ಅಭಿಪ್ರಾಯದಲ್ಲಿ ಉಚಿತವೆಂಬ ಭಾವವನ್ನು "ಮೆರೆಯು ತಿರ್ಪುದು" ಎಂಬ **ಕ್ರಿಯೆಯಿಂದ** ಸೂಚಿಸುವನು.

ಇನ್ನು ಮುಂದಕ್ಕೆ ಈ ಗ್ರಂಥ ವಿಷಯವಾಗಿ ವಿಮರ್ಶಾಪರ ಲೋಕದಲ್ಲಿ ಈಗ ನಡೆಯುತ್ತಿರುವ ಚರ್ಚೆಗಳ ವಿಚಾರದಲ್ಲಿ ನನಗಿರುವ ಅಭಿಪ್ರಾಯವನ್ನು ಯಥಾಮತಿ ವಿವರಿಸುತ್ತೇನೆ. ನನ್ನ ಆಶಯಗಳೆಲ್ಲವೂ ಸಂಗ್ರಹವಾಗಿ ಮೇಲೆ ಕೊಟ್ಟ ಗ್ರಂಥದ ನಯನಪ್ರಕಾರದಿಂದಲೇ ವ್ಯಕ್ತವಾಗುವುವು. ಆದರೂ ಅವುಗಳಲ್ಲಿ ಹಲವನ್ನು ಕುರಿತು ಕೆಳಗೆ ವಿಚಾರಮಾಡುವೆನು.

ಅವುಗಳಲ್ಲಿ (೧) ಕವಿಯ ನಿಜವಾದ ಹೆಸರೇನು? (೨) ಅವನಿದ್ದ ನಾಡು ಯಾವುದು? (೩) ಅವನಿಗೆ ರಾಜಾಶ್ರಯವಿದ್ದಿತೆ? (೪) "ಕಬ್ಬಿಗರಕಾವ," ಎಂಬುದು, ಗ್ರಂಥದ ಹೆಸರೇ? ಅಥವಾ ಕವಿಯ ಬಿರುದೇ? (೫) "ಅಚ್ಚಗನ್ನಡ" ವೆಂದರೆ ಅರ್ಥವೇನು? ಯಾವ ಅರ್ಥದಲ್ಲಿ ಪ್ರಯೋಗಿಸಿದೆ? (೬) ಕವಿಯ ಮತವಾವುದು? ಈ ವಿಷಯಗಳನ್ನು ಕುರಿತು ಸಕ್ರಮವಾಗಿ ವಿಚಾರಮಾಡುತ್ತೇನೆ.

(೧) **ಕವಿಯ ನಿಜವಾದ ಹೆಸರು:**—ಕವಿಯ ಹೆಸರು ಆಂಡಯ್ಯನೋ ಅಂಡಯ್ಯನೋ ಎಂಬ ಸಂಶಯವು ಹುಟ್ಟುತ್ತದೆ. ೯ನೆಯ ಪದ್ಯದಲ್ಲಿ ,,ಲೆಕ್ಕಿಗರಪಿರಿಯನೆನಿಪಾಂಡಯ್ಯಂ" ಎಂದೂ, ೧೧ರಲ್ಲಿ ,,ಲೆಕ್ಕಿಗರರಸನೆಸೆವಾಂಡಯ್ಯಂ" ಎಂದೂ ಮೂರು ಮಾತೃಕೆಗಳಲ್ಲಿಯೂ ಇವೆ. ಗ|| ಮಾತೃಕೆಯಲ್ಲಿ ,,ಪಿರಿಯನೆನಿಪಂಡೆಯ" ,,ಎಸೆವಂಡೆಯ" ಎಂದಿದೆ. ಮೇಲಿನ ಪಾಠಗಳ ಪ್ರಕಾರ ,, ಎನಿಪ+ಆಂಡಯ್ಯ" ,, ಎಸೆವ+ಆಂಡಯ್ಯ" ಎಂದೇ ಪದಚ್ಛೇದವಾಗಬೇಕು. ಗ|| ಮಾತೃಕೆಯನ್ನುನುಸರಿಸಿ ,, ಎನಿಪ+ಅಂಡೆಯ" (ಅಂಡಯ್ಯ), ,, ಎಸೆವ+ಅಂಡೆಯ" ಎಂದು ಪದಗಳನ್ನು ವಿಂಗಡಿಸಬೇಕು. ಅಂಡಯ್ಯ ಎಂಬುದಕ್ಕೆ ಲೇಖಕರು

ಅಂಡೆಯ ಎಂದು ಒರೆಯುವುದುಂಟು. ಆಂಡಯ್ಯ ಶಬ್ದಕ್ಕೆ ಆಂಡ+ ಅಯ್ಯ: (ತಮಿಳುಭಾಷೆಯನ್ನನುಸರಿಸಿ) ಆಳಿದ ಸ್ವಾಮಿ ಎಂದರ್ಥ ವಾಗುತ್ತದೆ. ಈಗಲೂ ಆಂಡವ಼್ ಎಂಬುದಕ್ಕೆ ತಮಿಳಲ್ಲಿ ಸ್ವಾಮಿ ಎಂಬರ್ಥದಲ್ಲ ಪ್ರಯೋಗವಿದೆ. ಅಂಡಯ್ಯ ಎಂದರೆ ಅಂಡಕ್ಕೆ+ಅಯ್ಯ-ಪತಿ, ಬ್ರಹ್ಮ ಎಂದು ಅರ್ಥವಾಗುತ್ತದೆ. ಜೈನರಲ್ಲಿ ಈಗಲೂ ಬ್ರಹ್ಮಯ್ಯ, ಬರ್ಮಪ್ಪ ಎಂಬ ಹೆಸರುಗಳು ವಾಡಿಕೆಯಲ್ಲಿವೆ. ಯಾರಲ್ಲಿಯೂ ಆಳಿದ ಸ್ವಾಮಿ ಎಂದು ಹೆಸರಿಡುವುದು ವಾಡಿಕೆಯಲ್ಲಿಲ್ಲ. ಆದುದರಿಂದ ಆಂಡಯ್ಯನೆಂಬುದೇ ಕವಿಗೆ ಸರಿಯಾದ ಹೆಸರಾಗಿರಬಹುದು. ಮೂರು ಮಾತೃಕೆಗಳ ಮೇಲುಗಡೆಯಲ್ಲಿ ಆಂಡಯ್ಯ ಎಂದಿದ್ದುದರಿಂದ ಆಂಡಯ್ಯನೆಂಬ ಹೆಸರನ್ನೇ ಕವಿಗೆ ಇಟ್ಟುಕೊಳ್ಳಲಾಯಿತು.

(೨) **ಕವಿಯ ನಾಡು**—ಕವಿಯು ತನ್ನ ನಾಡಿನ ಹೆಸರನ್ನು ಗ್ರಂಥದಲ್ಲಿ ಹೇಳಿಕೊಂಡಿಲ್ಲ. ಗ್ರಂಥೋಪೋದ್ಘಾತವನ್ನು ಮುಗಿಸಿದನಂತರ "ಒರೊಂದೆಡೆಯ" ಎಂದು ಆರಂಭಿಸಿ (೧೮), "ಗಾಳಿ ತೀಡುತ್ತಿರ್ಕುಂ" (೨೪) ಎನ್ನುವವರೆಗೆ ಕನ್ನಡನಾಡಿನ ಸಹಜಸೌಂದರ್ಯವನ್ನು ವರ್ಣಿಸಿಯೂ, ಈ ಮಧ್ಯೇ ೧೯ರಲ್ಲಿ "ಕನ್ನಡಮೆನಿಪ್ಪಾನಾಡು" ಎಂದು ಹೇಳಿ ಇರುವುದರಿಂದಲೂ, ಗ್ರಂಥಾಂತ್ಯದಲ್ಲಿ ಕಾಮಬಸಂತರು ಸುಖವಾಗಿ ವಿಹರಿಸುತ್ತಿದ್ದರೆಂದು ವರ್ಣಿಸುವ ೩೩೪ ನೆಯ "ಬಿಳಿಯನನೆಯ...." ಎಂಬ ರಗಳೆಯಲ್ಲಿ ಕನ್ನಡನಾಡಿನ ವರ್ಣನೆಯೇ ರೂಪುಗೊಂಡಂತಿರುವುದರಿಂದಲೂ; ಈ ಗ್ರಂಥವನ್ನು "ಗೋಸಣೆ ಮಾಡುವನ್ನಮಿದು **ರಾಯನ** ನಾಡ್ಕುಳೊಳಿರ್ಕೆ ನಿಚ್ಚಮುಂ" ಎಂದು ಹಾರೈಸಿ ಮುಗಿಸಿರುವುದರಿಂದಲೂ; ಕಾವ್ಯದಲ್ಲಿ ಕನ್ನಡನುಡಿ ಹೇಗಿರಬೇಕು? ಕಾವ್ಯವು "ಜಾಣ್ನುಡಿಯ ತಾಯ್ವನೆ" ಹೇಗೆ ಆಗಬೇಕು? "ನುಣ್ಬುರುಳೀಡ್ಗ" ಯಾಗಲು(ಒಳ್ಪೊಳ್ಪೆಯ ಆಶಯಗಳನ್ನೊಳಕೊಂಡು ಮೆರೆಯಲು) ಕಾವ್ಯವನ್ನು ಹೇಗೆ ನೇಯಬೇಕು? ಎಂಬ ಪ್ರಶ್ನೆಗಳಿಗೆಲ್ಲಾ ನಿದರ್ಶಕವಾಗಿ ತನ್ನ

ಈ ಕಾವ್ಯವು ನೇಯಲ್ಪಟ್ಟದೆ ಎಂದು ಹೇಳಿರುವುದರಿಂದಲೂ—ಕನ್ನಡ ನಾಡೇ ಎಂದರೆ ಕನ್ನಡಬಾಸೆ ನಡೆದಾಡುವ ನಾಡೇ ಈತನ ದೇಶ ವೆಂದು ನಿರ್ಧರಿತವಾಗುತ್ತದೆ. ಇದಕ್ಕೆ ಅವಿಸಂವಾದಿಯಾಗಿ ,, ರಾಯನ ನಾಟ್ಕಳೊಳ್ " ಎಂದು ಕವಿಯ ಮಾತೂ ಇದೆ. **ರಾಯ** ಎಂಬುದು ಕನ್ನಡದೇಶವನ್ನು ಆಳುವ ಅರಸರ ಬಿರುದೆಂದು ಹೇಳಬೇಕಾಗಿಲ್ಲ.

ಕವಿಯು ಇದ್ದುದು ಇಂಥ ನಾಡೆಂದೂ, ಅವನ ಕಾಲದಲ್ಲಿ ಇಂಥ ರಾಜನೇ ಆ ನಾಡನ್ನು ಆಳುತ್ತಿದ್ದನೆಂದೂ ನಿರ್ಧರಿಸಿ ಹೇಳಲು ಈ ಗ್ರಂಥದಲ್ಲಿ ಯಾವ ಆಧಾರವೂ ಇಲ್ಲ.

(೩) **ಕವಿಗೆ ರಾಜಾಶ್ರಯವಿದ್ದಿತೆ?**—ಕವಿಯು ತನಗೆ ರಾಜಾಶ್ರಯವಿತ್ತೆಂದು ಗ್ರಂಥದಲ್ಲಿ ಹೇಳಿಕೊಂಡಿಲ್ಲ. ತನಗೆ ರಾಜಾಶ್ರಯ ವಿದ್ದಲ್ಲಿ ಗ್ರಂಥದ ಆದ್ಯಂತದಲ್ಲಿ ಎಲ್ಲಿಯಾದರೂ ಹೇಳದೆ ಇರನು. **ರನ್ನ ಜನ್ನ**ರನ್ನು ಸ್ಮರಿಸಿದ ಕವಿಯು, ಆ ಮಹಾಕವಿಗಳ ಕಾವ್ಯಶೋಭೆಯನ್ನು ತನ್ನ ಗ್ರಂಥದಲ್ಲಿ ತರಲು ಯತ್ನಿಸಿ ಯಥೋಚಿತವಾಗಿ ತಂದ ಕವಿಯು, ,, ಪೊನ್ನನಿಕ್ಕದೊಡೆ ಪರ್ಬುದು ಬಳ್ಳಿ " ಎಂಬ ಮರ್ಯಾದೆಯಲ್ಲಿ ತನಗೆ ರಾಜನ ಬಹುಮಾನವಿದ್ದಲ್ಲಿ ತನ್ನ ಕಾವ್ಯಕ್ಕೆ ಮತ್ತಷ್ಟು ಮಹತ್ವ ಹುಟ್ಟು ವುದೆಂದು ಬಲ್ಲ ಕವಿಯು, ತನಗೆ ಆದರ್ಶಪ್ರಾಯರಾಗಿದ್ದ **ರನ್ನಜನ್ನ**ರಂತೆ ತನಗೆ ರಾಜಾಶ್ರಯವಿದ್ದಲ್ಲಿ ಹೇಳಿಕೊಂಡೇ ಇರುವನು. ತಾನೊಬ್ಬ ಸಾಮಾನ್ಯ ಕವಿಯಾದುದರಿಂದ ತನ್ನ ಲೇಖಿನಿಯ ಬಲದಿಂದಲೇ ತನಗೆ ಮಹತ್ವವು ಬರಬೇಕೆಂದು ನಂಬಿ, ತನ್ನ ಕಾವ್ಯದಲ್ಲಿ ಕಂಗೊಳಿಸುತ್ತಿರುವ ಮಹತ್ವವನ್ನು ೫, ೬, ೭, ೮ ರಲ್ಲಿ ಸೂಚಿಸಿ ಪ್ರಕಾಶಗೊಳಿಸಿ, ಅನಂತರ ತನ್ನ ವಂಶವನ್ನು ಹೇಳಿ, ತನಗೆ ಶೃಂಗಾರಕಾವ್ಯವನ್ನು ಒರೆಯಲು ಯೋಗ್ಯತೆವುಂಟೆಂದೂ ೧೨ರಲ್ಲಿ ಹೇಳಿ, ತದನಂತರ ಅರುಹಂತನಲ್ಲಿ ಭಕ್ತಿ ಮಾಡಿದವನಿಗೆ ಸಂಪಲ್ಲಕ್ಷ್ಮಿಯ ಕಟಾಕ್ಷವು ತಾನಾಗಿಯೇ ಒದಗುವುದು, (ಎಂದರೆ ತಾನು ಜಿತಮತಪ್ರವಿಷ್ಟನು, ತನಗೆ ಯಥಾಯೋಗ್ಯವಾಗಿ

ಸಂಪತ್ತುಂಟು) ಎಂದು ಹೇಳಿಕೊಂಡಿರುವುದನ್ನು ನೋಡಿದರೆ ಈತನಿಗೆ ರಾಜಾಶ್ರಯವಿರಲಿಲ್ಲವೆಂದು ನಿಸ್ಸಂದೇಹವಾಗಿ ಹೇಳಬಹುದು. ಈ ಗ್ರಂಥವನ್ನು „ ದೇಸೆಯ ಗೊತ್ತು, ಜಾಣ್ನುಡಿಯ ತವರ್ಮನೆ, ನುಣ್ಪುರುಳೀಡ್ಗ "ಯಾಗಿ ತಾನು ಬರೆದಿರುವುದರಿಂದಲೂ, ಇದನ್ನು ಪರಿಶೀಲಿಸಿ ಶ್ಲಾಘಿಸುವ ಕನ್ನಡಿಗರಿಗೆ ಕನ್ನಡನಾಡೇ ತವರ್ಮನೆಯಾಗಿರಬೇಕಾಗಿರುವುದರಿಂದಲೂ ಆ ಕನ್ನಡನಾಡಿನಲ್ಲಿ ತನ್ನಂಥ ಪ್ರತಿಯೊಬ್ಬ ಕನ್ನಡ ಕಬ್ಬಿಗನಿಗೂ ತನ್ನ ಕನ್ನಡಗಬ್ಬವು ಶಾಶ್ವತವಾಗಿ ಮೆರೆಯುತ್ತಿರಬೇಕೆಂಬ ಆಶೆಯು ಸಹಜವಾಗಿ ಉಂಟಾಗುವುದರಿಂದಲೂ ಕನ್ನಡ ಭಾಷೆಯು ವ್ಯವಹಾರಭಾಷೆಯಾಗಿರುವ, ರಾಯನೆಂಬ ಸಾಂಕೇತಿಕನಾಮವುಳ್ಳ ರಾಜರ ನಾಡುಗಳಲ್ಲಿ ತನ್ನ ಕನ್ನಡಕಾವ್ಯವು "ನಿಚ್ಚಮುಂ ನಿಲ್ಕೆ" ಎಂದು ಕೋರುವುದು ಸಹಜವಾಗಿದೆ. „ ನಾಟ್ಕಳೊಳ್ " ಎಂಬ ಬಹುವಚನ ಪ್ರಯೋಗವಿರುವುದರಿಂದ ಕನ್ನಡ ಭಾಷೆಯು ದೇಶಭಾಷೆಯಾಗಿರುವ ಕನ್ನಡದೇಶಗಳಲ್ಲೆಲ್ಲಾ ಎಂಬರ್ಥವಾಗುತ್ತದೆ. ಹೀಗಿರಲಾಗಿ ಕವಿಯು ಇದ್ದುದು ಇಂಥ ಕನ್ನಡನಾಡಿನ ಭಾಗ, ಅವನ ಕಾಲದಲ್ಲಿ ಇಂಥ ರಾಜನು ಆಳುತ್ತಿದ್ದ ಭಾಗ ಎಂದು ಕಂಡುಹಿಡಿಯಲು ಹೇಗೆ ಸಾಧ್ಯವು? ಊಹೆಯ ಮೇಲೆ ಬುದ್ಧಿಯನ್ನು ಓಡಿಸುತ್ತಾ ಹೋದರೆ ಎಲ್ಲಿ ನಿಲುಕಡೆ ಉಂಟು? ಇವನಿಗೆ ರಾಜಾಶ್ರಯವಿರಲಿಲ್ಲವೆಂದೇ ಹೇಳಬೇಕು. ರಾಜಾಶ್ರಯವಾಡಿಯೇ ಐಶ್ವರ್ಯವು ಬಂದಿದ್ದಲ್ಲಿ, ಅರುಹಂತನ ಕೃಪಾಲಬ್ಧವಾಗಿ ಸಂಪತ್ತು ತನಗೆ ಬಂದಿತೆಂದು ಹೇಳಿಕೊಳ್ಳುವವನಲ್ಲ.

(೪) **ಕಬ್ಬಿಗರಕಾವ** ಎಂಬುದು ಕವಿಯ ಬಿರುದೇ ಅಥವಾ ಗ್ರಂಥದ ಹೆಸರೇ? ಎಂಬ ವಿಚಾರ—ಕವಿಗೆ **ಕಾವ** (ಅಥವಾ ಅದರ ತತ್ಸಮ) **ಕಾಮ** ಎಂಬ ಹೆಸರು ಇದ್ದಂತೆ ತೋರಲಿಲ್ಲ. ೧೬ ನೆಯ ಪದ್ಯದಲ್ಲಿರುವ "ಕಾವನ ಕಬ್ಬಮುದಾರನಾದೊಡಂ" ಎಂದಿದೆಯಲ್ಲಾ ಎಂದರೆ ಅಲ್ಲಿ ಕಾವನ ಎಂಬುವಕ್ಕೆ **ಕಾಮ** ಎಂಬ ಹೆಸರುಳ್ಳ ಕವಿಯ

ಎಂದು ಅರ್ಥವನ್ನು ಮಾಡಲಾಗುವುದಿಲ್ಲ; ಕಾವನ ಎಂದರೆ ಮನ್ಮಥನ ವಿಷಯವಾದ ಎಂದೇ ಅರ್ಥಮಾಡಬೇಕು. ಈ ಕಾವ್ಯವು ಶೃಂಗಾರ ಕಾವ್ಯವೂ, ಮನ್ಮಥನ ಗೆಲ್ಲದ ವರ್ಣನೆಯಾಗಿಯೂ ಇರುವುದು. ಆದ ಕಾರಣ ಕವಿಯು ಗ್ರಂಥಾದಿಯಲ್ಲಿ "ನನೆವಿಲ್ಲ ಬಲ್ಲಹಂ ಎನ್ನ ಜಾಣ್ನುಡಿಗೆ ಮೆಯ್ಸಿರಿಯಂ ಈಗೆ!" ಎಂದು ವಸ್ತುನಿರ್ದೇಶಾತ್ಮಕವಾದ ಮಂಗಳವನ್ನು ಮಾಡಿದ್ದಾನೆ. ಆಮೇಲೆ ೫ ರಿಂದ ೮ ರ ವರೆಗೆ ತನ್ನ ಕಾವ್ಯವು ಇಂಥ ಮಹತ್ವವುಳ್ಳದೆಂದು ತಿಳಿಸಿದ್ದಾನೆ. ಬಳಿಕ ೯ ರಿಂದ ೧೩ ರ ತನಕ ತನ್ನ ಚರಿತ್ರವನ್ನು ಹೇಳಿದ್ದಾನೆ. ಆಮೇಲೆ ೧೪ ರಲ್ಲಿ ಕಾವ್ಯದ ಮಹತ್ವವನ್ನು ಹೇಳಹೊರಟು, ಅಲ್ಲ ರಸಿಕರ ಮನಸ್ಸನ್ನು ಅಪಹರಿಸುವ ಎಳಗಿಳಿವಿಂಡು, ಮಿಳಿರ್ದಾಡುವ ತುಂಬಿಯ ಬಂಬಲು, ಕೆಂದಳಿರ್ಗಳ ತೊಂಗಲು, ನಡೆನೋಡುವ ಪೆಂಡಿರ ನೋಟ, ಪೂವಿನ ಪೊಸಗಂಪಿನೊಳ್ ಪೊರೆದು ತೀಡುವ ತೆಂಬಲರ್ ಎಂಬ ಉಪಮಾನಗಳನ್ನು ಕೊಟ್ಟು, ಅವುಗಳಂತೆ "ಕಾವನ ಕಬ್ಬಂ" ಯಾರ ಮನಸ್ಸನ್ನು ತಾನೆ ಅಪಹರಿಸದು? ಎಂದು ಹೇಳಿದ್ದಾನೆ. ಇಲ್ಲಿ ಕೊಟ್ಟಿರುವ ಉಪಮಾನಗಳನ್ನೆಲ್ಲಾ ಪರಿಶೀಲಿಸುವಲ್ಲಿ ಅವೆಲ್ಲವೂ ಮನ್ಮಥನಿಗೆ ಬೆಂಬಲವಾಗಿ ಜಯವನ್ನು ಉಂಟುಮಾಡುವ ಸಾಧನಗಳಾಗಿರುವುವು. ದೃಷ್ಟಾಂತಗಳ ಸಮಷ್ಟಿಬಲದಿಂದ ಕಂಗೊಳಿಸುವ "ಕಾವನ ಕಬ್ಬ" ಎಂದರೆ ಮನ್ಮಥನ ವಿಷಯವಾಗಿ, ಮನ್ಮಥನ ಪ್ರತಾಪವನ್ನು ಮೆರೆಯಿಸುವ ಕಬ್ಬ-ಕಾವ್ಯ ಎಂದೇ ಅರ್ಥವಾಗಬೇಕು; ಸಂದರ್ಭವನ್ನು ನೋಡಿದರೆ ಕಾಮನೆಂದು ಹೆಸರುಳ್ಳ ತನ್ನ ಕಾವ್ಯವೆಂದು ಅರ್ಥಮಾಡುವುದು ಸಮಂಜಸವಾಗಿ ತೋರುವುದಿಲ್ಲ. ಕಾವನೆಂಬುದಕ್ಕೆ ಮನ್ಮಥವಿಷಯಕವಾದ ಎಂದರ್ಥವನ್ನೇ ಏಕೆ ಮಾಡಬೇಕು? ಎಂದರೆ—ತನ್ನ ಕವಿಚರಿತ್ರೆಯಲ್ಲಿ ತನಗೆ ಕಾಮನೆಂಬ ಹೆಸರಿತ್ತೆಂದು ಕವಿಯು ಹೇಳಿಕೊಂಡಿಲ್ಲ. ತನ್ನ ಚರಿತ್ರೆಯಲ್ಲಿ ಹೇಳದೆ ಕಾಮನೆಂದು ತಟ್ಟನೆ ಹೇಳಿಕೊಳ್ಳುವನೆ? ಹೇಳಿ. ಲೋಕ

ದಲ್ಲಿ ಯಾರಾದರೂ ಹೀಗೆ ಹೇಳಿರುವರೇ? ತನ್ನ ಕಾವ್ಯದ ಮಹತ್ವ ವನ್ನು ಸಂಗ್ರಹಿಸಿ ಈ ಪದ್ಯದಲ್ಲಿ ಹೇಳಿ, ಮುಂದಣ ೨ ಪದ್ಯಗಳಲ್ಲಿ ತಾನು ಇಂಥ ಗ್ರಂಥವನ್ನು ಬರೆಯಲು ಸಂದರ್ಭವನ್ನು ಹೇಳಿರುವನು. ಅವುಗಳ ಮುಂದಣ (೧೭) ಪದ್ಯದಲ್ಲಿ "ಸಿಂಗರಮೇಳ್ಗೆಯಂ ಪಡೆಯೆ ....ನನೆವಿಲ್ಲನ ಬೀರಮನೊಲ್ದು ಪೇಳ್ವೆನಾಂ | ತಿಂಗಳ ಸೊಂಪು ಗುಂಪು ವಡೆದೆಣ್ದೆಸೆಗಂ ಪರಿಗೊಂಡುದೆಂಬಿನಂ ||" ಎಂದು ಹಿಂದೆ ೧೪ ನೆಯ ಪದ್ಯದಲ್ಲಿ ಸೂಚಿಸಿದ ಅಭಿಪ್ರಾಯನ್ನೇ "ನನೆವಿಲ್ಲನ ಬೀರಮಂ ಪೇಳ್ವೆನಾಂ" ಎಂದು ಸ್ಥಿರಪಡಿಸಿ ಹೇಳಿರುತ್ತಾನೆ. "ನನೆವಿಲ್ಲನ ಬೀರ ಮಂ" ಎಂಬುದರ ವಿಶೇಷಣಗಳನ್ನೂ, "ಕಾವನ ಕಬ್ಬ" ಕ್ಕೆ ಕೊಟ್ಟಿ ರುವ "ತಿಂಗಳ ಸಿರಿ" ಎಂಬ ಉಪಮಾನವನ್ನೂ, "ತಿಂಗಳ ಸೊಂಪು ಗುಂಪುವಡೆದು...." ಎಂದು ಇಲ್ಲಿರುವುದನ್ನೂ ಗಮನಿಸಿರಿ,

ನಮ್ಮ ಕವಿಗೆ ಕಾಮನೆಂದೂ ಆತನಿಗೆ ಆಶ್ರಯದಾತನಾದ ರಾಜ ನಿಗೆ "ಕಬ್ಬಿಗರಕಾವ" ಎಂದು ಹೆಸರು ಇಲ್ಲವೆ ಬಿರುದು ಇತ್ತೆಂದು ಹೇಳ ದಿದ್ದ ಪಕ್ಷದಲ್ಲಿ ೧೬ನೆಯ ಪದ್ಯದಲ್ಲಿರುವ "ಕಬ್ಬಿಗರ ಕಾವನೊಲವಿಂದೊ ರೆದಂ—ದೊರೆದಂ" ಎಂಬ ವಾಕ್ಯಕ್ಕೆ ಅರ್ಥಕಲ್ಪನೆ ಹೇಗೆ? ಎಂದರೆ ಅದನ್ನು ಹೀಗೆ ಹೇಳಬಹುದು. ನಾನು ಹಿಂದೆ ಕೊಟ್ಟಿರುವ ಕಾವ್ಯನ ಯನ ಪ್ರಕಾರದಲ್ಲಿ ೧೧ನೆಯ ಪುಟವನ್ನು ನೋಡಿದರೆ ಸ್ಪಷ್ಟವಾಗುತ್ತದೆ. ಕವಿಯು ತನಗೆ ಕಾಮನೆಂಬ ಹೆಸರಿತ್ತೆಂದು ಎಲ್ಲಿಯೂ ಹೇಳಿಕೊಂಡಿಲ್ಲ; "ಕಾವನ ಕಬ್ಬಂ" ಎಂಬುದಕ್ಕೆ ಕಾಮ ವಿಷಯವಾದ ಎಂದರ್ಥವನ್ನೇ ಮಾಡಬೇಕೆಂದು ನಿರೂಪಿಸಿದ್ದಾಯಿತು. ನನ್ನ ಅಭಿಪ್ರಾಯದಲ್ಲಿಯಾದ ರೋ "ಕಬ್ಬಿಗರ ಕಾವ" ನೆಂದು ಕವಿಯ ಸ್ನೇಹಿತರು ಅವನಿಗೆ ಕೊಟ್ಟ ಬಿರುದೆಂಮೂ, ಕವಿಯು ತನಗೆ ಕೊಟ್ಟ ಆ ಬಿರುದನ್ನು ತನ್ನ ಗ್ರಂಥಕ್ಕೆ ಆರೋಪಿಸಿರುವನೆಂದೂ ಇದೆ. ಇಂಥ ಅಸದೃಶವಾದ ಕಾವ್ಯವನ್ನು ಅವರ ನಿರೀಕ್ಷೆಗೆ ತಕ್ಕಂತೆ ತನ್ನ ಸಾಮರ್ಥ್ಯವನ್ನು ತೋರಿಸಿ ಪೂರ್ವಕವಿಗಳ

ಮೇಲೆ ಆರೋಪಿತವಾದ ಅಸಾಮರ್ಥ್ಯರೂಪ ದೋಷವನ್ನು ಹೋಗಲಾಡಿಸಿದುದರಿಂದ “ಕಬ್ಬಿಗರ ಕಾವ” ಎಂದರೆ ಕವಿಗಳನ್ನು ಕಾಪಾಡಿದವನು ಎಂಬ ಬಿರುದು ಈತನಿಗೆ ಸಲ್ಲುವುದೆಂದು ಯೋಚಿಸಿ “ಬಲ್ಲವರು” ಎಂದರೆ ಸ್ನೇಹಿತರು ಕೊಟ್ಟರೆಂದು ಹೇಳಲು ಗ್ರಂಥದಲ್ಲಿ ಬಹಳ ಅವಕಾಶ ಕಾಣುತ್ತದೆ. ಹಿಂದೆ ೫ ನೆಯ ಪದ್ಯದಲ್ಲಿ “ಪಲರೆಲ್ಲರ್ ತಿರ್ದಿದೀ ಕಬ್ಬಂ ಎಂತಪ್ಪಂಗಂ ಕೊರಲ್ಗೊಳ್ಳದೇ” ಎಂದೂ, ೭ ನೆಯ ಪದ್ಯದಲ್ಲಿ “ಕನ್ನಡದೊಳ್ಪಿನ ನುಡಿಯಂ ಮುನ್ನಿದಱೊಳ್ ನೋಡಿಕೊಳ್ವುದು ಚಮುರಂ” ಎಂದೂ, ೮ ರಲ್ಲಿ “ಸೊಗಯಿಪ ಕಬ್ಬಮಂ ಕಬ್ಬಿಗರಲ್ಲದೆ ಮೆಚ್ಚರ್” ಎಂದೂ, ೧೮ರಲ್ಲಿ “ಬರ್ದಿಂಗೊಳಗಾದ ಮಾತಮರೆ ಬಲ್ಲವರಾ ಎನೆ ಪೇಳ್ವೆನಾಂ” ಎಂದೂ ಹೇಳಿದ್ದಾನೆ. ಮತ್ತು ಗ್ರಂಥಾಂತ್ಯದ ಪರಿಸಮಾಪ್ತಿ ಪದ್ಯದಲ್ಲಿ “ಬಲ್ಲವರಗ್ಗದ ಕನ್ನಡಂಗಳಿಂ | ಬಾಸಣಮಾಗೆ ಪೇಳ್ದನೊಲವಿಂ ಕಬ್ಬಿಗರೊಪ್ಪೆ” ಎಂದು ತನ್ನ ಪ್ರತಿಜ್ಞಾನಿರ್ವಾಹವನ್ನು ಉದ್ಘೋಷಿಸುತ್ತಾನೆ. ಆದುದರಿಂದ ಕಬ್ಬಿಗರ ಕಾವನೆಂಬ ಬಿರುದನ್ನು ಕಬ್ಬಿಗರಾದ ಬಲ್ಲವರು ಈತನಿಗೆ ಕೊಟ್ಟರೆಂದು ನಿರ್ಧರವಾಗಿ ಹೇಳಬಹುದು. ಕವಿಗೆ ಯಾವ ರಾಜಾಶ್ರಯವು ಇರಲಿಲ್ಲವಾಗಿ ಯಾವ ರಾಜನೂ ಕೊಡಲಿಲ್ಲವೆಂದೂ ಹೇಳಬಹುದು. ಕವಿಯು ಈ ಕಾವ್ಯವನ್ನು ಬರೆದುದರಿಂದಲ್ಲವೆ ತನಗೆ ಸ್ನೇಹಿತರಲ್ಲಿ ಮಾನ್ಯವೂ ಈ ಬಿರುದೂ ಬಂದಿತೆಂದು ಆದರಲ್ಲಿ ಕೃತಜ್ಞತಾನುಸಂಧಾನ ಮಾಡಿ, ತನ್ನ ಬಿರುದನ್ನೇ ಅದಕ್ಕೆ ನಿರೂಪಕವಾದ ಹೆಸರಾಗಿರಬೇಕೆಂದು ಯೋಚಿಸಿ, ತನಗೆ ತನ್ನ ಈ ಕಾವ್ಯದಲ್ಲಿದ್ದ ಗೌರವಕ್ಕೆ ಸೂಚಕವಾಗಿ ಅದಕ್ಕೆ ಪುಂಸ್ತ್ವಾರೋಪನ್ನು ಮಾಡಿ, ಆ ಹೆಸರನ್ನೇ ಕೊಟ್ಟಿರಬಹುದು. ಆಗಲ್ಲವೆ “ಕಬ್ಬಿಗರಕಾವನೊಲವಿಂ ದೊರೆದಂ” ಎಂಬ ಪಾಠಕ್ಕೆ ಕಬ್ಬಿಗರಕಾವನು +ಒಲವಿಂದೆ+ಬರೆದಂ-ಹೇಳಲ್ಪಟ್ಟನು,* ಬರೆಯಲ್ಪಟ್ಟನು ಎಂದಾಗಲಿ,

* ಅಕರ್ಮಕ ಧಾತುವನ್ನು ಸಕರ್ಮಕವಾಗಿಯೂ, ಸಕರ್ಮಕ ಧಾತುವನ್ನು ಕರ್ಮಣ್ಯರ್ಥದಲ್ಲಿಯೂ ಪ್ರಯೋಗಿಸುವುದು ಕನ್ನಡದಲ್ಲಿ ವಾಡಿಕೆಯಾಗಿದೆ.

ದ್ವಿತೀಯಾರ್ಥೇ ಪ್ರಥಮಾ ಎಂಬ ವ್ಯಾಕರಣಮರ್ಯಾದೆಯನ್ನನುಸರಿಸಿ ಕಬ್ಬಿಗರ ಕಾವನೆಂಬ ಗ್ರಂಥವನ್ನು ಒರೆದೆಂ ಎಂದಾಗಲಿ, "ಕಾವನೊಲವಿಂದೊರೆದಂ"—ಕಬ್ಬಿಗರ ಕಾವನಾದ ನಾನು ಅವರ ಬಯಕೆಯಂ ಸಲಿಸಲು ಈ ಗ್ರಂಥವನ್ನು (ಅಧ್ಯಾಹಾರ) ಒರೆದಂ-ಬರೆದೆನು ಎಂದಾಗಲಿ ಅರ್ಥವಾಗಿ "ಕಬ್ಬಿಗರ ಕಾವನೊನವಿಂದೊರೆದಂ-ದೊರೆದೆಂ" ಎಂಬ ಪಾಠದ್ವಯಕ್ಕೂ ಸಮಂಜಸವಾಗಿ ಅರ್ಥವಾಗುತ್ತದೆ. ಅಂತೂ ಇಂತೂ ಕಬ್ಬಿಗರ ಕಾವನೆಂದು ಬಲ್ಲವರು ತನಗೆ ಕೊಟ್ಟ ಬಿರುದನ್ನು ಈ ಗ್ರಂಥಕ್ಕೆ ಕವಿಯೇ ಕೊಟ್ಟಿರಬಹುದು; ಇಲ್ಲವೆ ಬಲ್ಲವರೇ ಕೊಟ್ಟಿರಬಹುದು. ಈ ನನ್ನ ಊಹೆಯನ್ನು ಸ್ಥಿರಪಡಿಸಲು ಗ್ರಂಥಾಂತ್ಯದ ಗದ್ಯದಲ್ಲಿ "ಕಾವನ ಗೆಲ್ಲಂ ಮೆಱೆಯುತಿರ್ಪುದು" ಎಂಬ ಕವಿವಾಕ್ಯವಿದ್ದರೂ, "ಕಾವನ ಗೆಲ್ಲ" ವೆಂದು ಹೆಸರು ರೂಢಿಗೆ ಬಾರದೆ "ಕಬ್ಬಿಗರ ಕಾವ" ವೆಂಬ ಹೆಸರೇ ರೂಢಿಗೆ ಬಂದಿರುವುದೇ ಕಾರಣವಾಗಿದೆ.

ಹೀಗಿರುವಾಗ ಯಾವದೊಂದು ಬಾಹ್ಯಪ್ರಮಾಣ, ಅಂತರಪ್ರಮಾಣಗಳ ಸಹಾಯವಿಲ್ಲದೆ "ಕಬ್ಬಿಗರ ಕಾವನೆಂಬ ರಾಜನ ಒಲವಿಂದ ಕಬ್ಬಿಗರ ಕಾವನಾದ ಕವಿಯು ಬರೆದನೆಂದು" ಹೇಗೆ ಅರ್ಥಮಾಡಲಾದೀತು. ಸುಮ್ಮನೆ ಊಹೆಯ ಮೇಲೆ ಅರ್ಥಮಾಡಲಾದೀತೆ?

(ಌ) ೧೬ನೆಯ ಪದ್ಯದಲ್ಲಿರುವ "ಅಚ್ಚಗನ್ನಡ" ವೆಂಬುದಕ್ಕೆ ಏನು ಅರ್ಥ? 'ಅಚ್ಚಗನ್ನಡ' ಎಂಬಲ್ಲಿ 'ಅಚ್ಚ' ಎಂಬುದು ಅಚ್ಛ ಎಂಬ ಸಂಸ್ಕೃತಶಬ್ದದ ತದ್ಭವರೂಪವಾಗಿದೆ. ಅಚ್ಛ ಎಂಬುದಕ್ಕೆ ಇತರ ಸಂಪರ್ಕವಿಲ್ಲದ, ಶುದ್ಧವಾದ, ಮನೋಹರವಾದ ಎಂಬ ಅರ್ಥವಾಗುತ್ತದೆ. ಪ್ರಯೋಗಾಂತರ—"ಅಸಮಸಂಸ್ಕೃತಗಳಿನಚ್ಚಗನ್ನಡದೊಳ್" ಶ. ದ. ೯೬, ಅಚ್ಚವೆಳ್ದಿಂಗಳ್—ಶ. ದ. ೧೩೪. ಇಲ್ಲಿ ಕವಿಯು ನೀರನ್ನು ಶೋಧಿಸಿದರೆ ಕಾಲುಷ್ಯವು ಹೋಗಿ ನೀರು ಸ್ವಚ್ಛವಾಗುವಂತೆ ತದ್ಭವವೂ-ಸಂಸ್ಕಾರದಿಂದ ಮಾರ್ಪಾಡಾದ ಸಂಸ್ಕೃತವೂ, ಸಂಸ್ಕಾರಮಾಡಿ

ದರೂ ನೈಜರೂಪವನ್ನು ಕಳೆದುಕೊಳ್ಳದೆ ಇರುವ ಸಮಸಂಸ್ಕೃತಶಬ್ದವೂ ದೇಶ್ಯಶಬ್ದಗಳ ಗುಂಪಿಗೆ ಬರಲು ಅರ್ಹತೆಯನ್ನು ಹೊಂದುವುವೆಂದೂ, ಆದುದರಿಂದ ಅವು ಕನ್ನಡಶಬ್ದಗಳೇ ಆಗುವುವೆಂದೂ, ಅಥವಾ ತನ್ನ ನೈಜಸ್ವರೂಪವನ್ನು ಕಳೆದುಕೊಂಡು ತದ್ಭವರೂಪಕ್ಕೆ ಬಂದಮೇಲೆ ಅವುಗಳಲ್ಲಿದ್ದ ಕಸರು ಕಾರ್ಕಶ್ಯಗಳೆಲ್ಲಾ ಹೋಗಿ ಮೃದುವಾಗಿ, ಸ್ವಚ್ಛವಾಗಿ, ಶ್ರಾವ್ಯವಾಗುವಿಕೆಯನ್ನು ಕಂಡು ಅವು ಅಚ್ಚಗನ್ನಡವಾದುವು ಎಂದು ಕವಿಯು ಅಭಿಪ್ರಾಯಪಟ್ಟಂತೆ ತೋರುತ್ತದೆ. ತದ್ಭವಶಬ್ದಗಳನ್ನೂ, ಸಮಸಂಸ್ಕೃತಶಬ್ದಗಳನ್ನೂ ಹೇರಳವಾಗಿ ಪ್ರಯೋಗಿಸಿ ಪ್ರತಿಜ್ಞಾಹಾನಿಯನ್ನು ಕವಿಯು ತಂದುಕೊಳ್ಳಲಿಲ್ಲವೆಂದು ತಿಳಿದುಬರುತ್ತದೆ.

(೬) ಈ ಕವಿಯ ಮತವೇನು ?—ಈ ಗ್ರಂಥದ ನಯನಪ್ರಕಾವನ್ನು ಚೆನ್ನಾಗಿ ಗಮನಿಸಿದರೆ, ಕವಿಯು ಜೈನನೆಂದೇ ಹೇಳಬೇಕು. ಬೇರೆ ವಿಧವಾಗಿ ಹೇಳಲು ಆಧಾರವಿಲ್ಲ. ಜೈನಕವಿಗಳಲ್ಲಿ ಪ್ರಾಯಶಃ ವೈದಿಕಕಾವ್ಯವೊಂದನ್ನೂ, ಲೌಕಿಕಕಾವ್ಯವೊಂದನ್ನೂ ಬರೆಯುವ ಪದ್ಧತಿಯುಂಟು. **ರನ್ನ, ಜನ್ನ, ಪಂಪ, ಅಭಿನವಪಂಪ, ನೇಮಿ** ಮೊದಲಾದ ಕವಿಗಳ ಚರಿತ್ರೆಗಳನ್ನು ಪರಾಮರ್ಶಿಸಿರಿ. ಅವರಂತೆ ಸಮರ್ಥನಾದ ಆಂಡಯ್ಯನೂ ಒಂದು ವೈದಿಕಕಾವ್ಯವನ್ನೂ ಬರೆದಿರಬಹುದು. ಅವನ ವೈದಿಕಕಾವ್ಯವು ಇನ್ನೂ ನಮಗೆ ಸಿಕ್ಕಿಲ್ಲ. ಜೈನಕವಿಗಳು ಲೌಕಿಕಕಾವ್ಯದಲ್ಲಿಯೂ ಮತಧರ್ಮಗಳನ್ನು ಎಲ್ಲಿಯಾದರೂ ಅವಕಾಶವನ್ನು ಕಲ್ಪಿಸಿಕೊಂಡು ಹೇಳದೆ ಇರುವುದಿಲ್ಲ. ಪಂಪರಾಮಾಯಣವನ್ನು ನೋಡಿರಿ. ಜೈನಕವಿಗಳ ಪದ್ಧತಿಯನ್ನನುಸರಿಸಿ ನಮ್ಮ ಆಂಡಯ್ಯನೂ ಜೈನಮತೋಪದೇಶಕ್ಕೆ ಅವಕಾಶವನ್ನು ಕಲ್ಪಿಸಿಕೊಂಡಿರುತ್ತಾನೆ. ಲೋಕದಲ್ಲಿ ಸಮಸ್ತರ ಪ್ರವೃತ್ತಿಯೂ ಕಾಮಮೂಲಕವೆಂದು ಎಲ್ಲರೂ ಬಲ್ಲರು. ವೇದವೂ ಅದನ್ನೇ ಉದ್ಘೋಷಿಸುತ್ತದೆ. ಇದನ್ನೇ ಕಾವ್ಯರಸಜ್ಞರು ತ್ರಿಮೂರ್ತಿಗಳೂ ಕೂಡ ಕಾಮನ ಸಾಮ್ರಾ

ಜ್ಯಕ್ಕೆ ಒಳಪಟ್ಟಿರುವರೆಂದು ತಿಳಿಸಲು ಕಾಮನ ಬಾಣದ ಪೆಟ್ಟನ್ನು ತಡೆಯಲಾರದೆ ಅವರಲ್ಲಿ ಒಬ್ಬನಾದ ಬ್ರಹ್ಮನು ಪತ್ನಿಯಾದ ಸರಸ್ವತಿ ಯನ್ನು ಬಾಯಲ್ಲಿಯೂ, ವಿಷ್ಣುವು ಲಕ್ಷ್ಮಿಯನ್ನು ಎದೆಯಲ್ಲಿಯೂ, ಶಿವನು ಶರೀರಾರ್ಧದಲ್ಲಿಯೂ ಇಟ್ಟುಕೊಂಡಿರುವರೆಂದು ವರ್ಣಿಸುವ ಪದ್ಧತಿ ಇರುವುದು. ಜೈನರು ಶ್ರವಣನೊಬ್ಬನೇ ಕಾಮನ ಬಾಣಕ್ಕೆ ಗುರಿಯಾಗದೆ ತಪಸ್ಸಿನಲ್ಲಿ ನಿಂತು ಕಾಮನನ್ನು ಜಯಿಸಿದನೆಂದು ಹೇಳು ವರು. ಕಾಮನ ಗೆಲ್ಲವನ್ನು ಹೇಳಲು ಹೊರಟ ಕವಿಯು ಜೈನನಾದುದರಿಂದ ಮೊದಲು ಕಥಾನಾಯಕನಾದ ನನೆವಿಲ್ಲ ಬಲ್ಲಹನನ್ನು ಸ್ತುತಿಸಿ, ಅನಂ ತರ ತ್ರಿಮೂರ್ತಿಗಳನ್ನು ಕಾವ್ಯಕ್ಕೆ ಜಯಕೊಡಲಿ (ಪರ್ಯಾಯವಾಗಿ ಎಮ್ಮಂ ಪೊರೆಗೆ) ಎಂದು ಮೊದಲು ಸ್ಮರಿಸಿರುವನು. ಮನ್ಮಥನು ಜೈತ್ರ ಯಾತ್ರೆಗಾಗಿ ಹೊರಟ ಸಂದರ್ಭದ ಅವಕಾಶವನ್ನು ತೆಗೆದುಕೊಂಡು, ಮಧ್ಯೇ ಒಂದು ಬೆಟ್ಟದ ಮಾರ್ಗವಾಗಿ ಹೊರಟಂತೆಯೂ, ಅಲ್ಲಿ ತಪಸ್ವಿ ಗಳು ಕಾಮನನ್ನು ಲಕ್ಷ್ಯಮಾಡದೆ ತಪಸ್ಸುಮಾಡುತ್ತಿದ್ದಂತೆಯೂ, ಅವರ ತಪೋಮಹಿಮೆಯಿಂದ ಮೃಗಾದಿಗಳು ಸ್ವತಸ್ಸಿದ್ಧವಾದ ವೈರವನ್ನು ತ್ಯಜಿ ಸಿ ಮೈತ್ರಿಯಿಂದಲೂ ಶಾಂತಿಯಿಂದಲೂ ಇದ್ದಂತೆಯೂ ವರ್ಣಿಸಿ, ಬಳಿಕ ಅವರ ಮೇಲೆ ಮನ್ಮಥನು ಕುಪಿತನಾದಂತೆಯೂ, "ಮಿತಾತ್ ತ್ರಾಯತೇ ಇತಿ ಮಿತ್ರಃ" ಎಂಬ ಮರ್ಯಾದೆಯಲ್ಲಿ ಮಿತ್ರನಾದ ಬಸಂತನು ಎಚ್ಚ ರಿಸಿ (೨೨೯-೩೩೧) ಧರ್ಮೋಪದೇಶಮಾಡಿದಂತೆಯೂ, ಅದನ್ನು ಕೇಳಿ ಕಾಮನು ಗಡಗಡನೆ ನಡುಗಿ "ಮುಂದೆ ತಿಸುಳಿಯಂ ಗೆಲ್ವುದರ್ಕೆ ಮುಡಿ ಗಿಕ್ಕುವಂತೆ ನಿಡುಗೈಗಳಂ ಮುಡಿಗಿಕ್ಕಿ ನಡೆದಂ" ಎಂದೂ ಹೇಳಿರು ತ್ತಾನೆ. ಜಗತ್ತನ್ನೆಲ್ಲಾ ಮೋಹಗೊಳಿಸಿ ತನ್ನ ಪರಾಕ್ರಮದಿಂದ ವಶಮಾಡಿಕೊಂಡ ಮನ್ಮಥನಿಗೂ ಜಗತ್ಸಂಹಾರಕನಾಗಿ ತ್ರಿಮೂರ್ತಿ ಗಳಲ್ಲಿ ಒಬ್ಬನಾದ ಶಿವನಿಗೂ ನಡೆದ ಘೋರಯುದ್ಧವನ್ನು ನೋಡಲು ಮನ್ಮಥನಿಂದ ಪರಾಜಿತರಾದ ಬ್ರಹ್ಮ, ವಿಷ್ಣು, ಇಂದ್ರ

ಬಿಸುಗಣ್ಣೊರವರು ಮುಗಿಲಿಡೆಯಲ್ಲಿ ನಿಂತಿದ್ದರೆಂದು (೨೬೯-೨೯೨ ರಲ್ಲಿ) ಹೇಗೆ ಭಾರತ, ರಾಮಾಯಣ, ಜೈಮಿನಿ ಭಾರತಗಳ ಯುದ್ಧ ಪ್ರಕರಣಗಳಲ್ಲಿ ದೇವಾದಿಗಳು ಆಕಾಶದಲ್ಲಿ ಬಂದಿದ್ದರೆಂದು ಹೇಳಿರು ವರೋ, ಹಾಗೆ ಇಲ್ಲಿಯೂ ಕವಿಯು ಹೇಳಿರುವನು. ಬ್ರಹ್ಮಾದಿಗಳು ಶಿವನ ಪಾರಿಷದರಲ್ಲ. ವಿಷ್ಣುವಿನ ಸಭೆಯಲ್ಲಿ ಶಿವಾದಿಗಳು ಇದ್ದರೆಂದು ಹೇಳುವಂತೆ, ಪ್ರತಿನಾಯಕನಾದ ಶಿವನ ಸಭೆಯಲ್ಲಿ ವಿಷ್ಣ್ವಾದಿಗಳು ಇದ್ದರೆಂದು ಈ ಗ್ರಂಥದಲ್ಲಿಯೂ ಹೇಳಿರುತ್ತದೆ. ಬ್ರಹ್ಮ, ವಿಷ್ಣು, ಇಂದ್ರಾದಿಗಳಿಗೆ ವಾಹನಾದಿಗಳನ್ನು ಹೇಳಿ, ಬಿಸುಗಣ್ಣೊರವನಿಗೆ ಮಾತ್ರ ಹೇಳದೆ ಬಿಟ್ಟಿರುವುದರಿಂದಲೂ, ಬ್ರಹ್ಮ, ವಿಷ್ಣು, ದಿಕ್ಪಾಲಕರಿಗೆ ದೇವ ತಾತ್ವ ವ್ಯವಹಾರವಿರುವುದರಿಂದಲೂ, ಬಸುಗಣ್ಣೊರವನು ಕಾಮನನ್ನು ಎದುರಿಸಿದ "ಈಸನು" ಬೇರೆ ಆಗಲಾರನು. ಅಷ್ಟದಿಕ್ಪಾಲಕರಲ್ಲಿ ಒಬ್ಬನಾದ ಈಶಾನನೇ ಆಗಿರಬೇಕು. ಮತ್ತು ಶಿವನು ಕೂಡ ಪಾರ್ವ ತಿಗೆ ವಶನಾಗಿ ಕಾಮನಿಗೆ ಪರವಶನಾದುದರಿಂದ ಪೌರಾಣಿಕರಂತೆ ಕವಿಯು ಶಿವನು ಕಾಮನನ್ನು ತನ್ನ ಫಾಲನೇತ್ರಾಗ್ನಿಯಿಂದ ಸುಟ್ಟು ಬೂದಿಮಾಡಿದನೆಂದೂ, ಬಳಿಕ ರತಿಯ ಮೊರೆಯನ್ನು ಕೇಳಿ ಅವಳಿಗೆ ಮಾತ್ರ ಅಶರೀರಿಯಾಗಿ ದರ್ಶನಕೊಡುತ್ತಿರು ಎಂದು ಮನ್ಮಥನಿಗೆ ಅನು ಗ್ರಹಮಾಡಿದನೆಂದೂ ತನ್ನ ಕಾವ್ಯದಲ್ಲಿ ಹೇಳದೆ, ತಾನು ಜೈನನಾದುದ ರಿಂದ ಕಾಮನ ಬಾಣದ "ಕೋಳ್ಗೆ" ತನ್ನಲ್ಲಿದ್ದ ಪುಂಸ್ತ್ವವನ್ನೂ ಕೂಡ ಕಳೆದುಕೊಂಡು ಶಿವನು "ಅರೆವೆಣ್ಣಾಗಿ" (ಅರೆವಾಸಿ ಹೆಣ್ಣಾಗಿ) ಹೋದನೆಂದು ಹೇಳಿ, ಅಷ್ಟಕ್ಕೂ ನಿಲ್ಲಿಸದೆ, ಶಾಪಕೊಟ್ಟನೆಂದು ಹೇಳಿ ದ್ದಾನೆ. ಆ ಶಾಪವು ಕೂಡ "ಪಿರಿಯರೆಂಬುದಂ ಬಗೆಯದೆ ಎನ್ನೊಳ್ ಕಾದಿಧೆ; ನಿನ್ನೋಪಳಂ ಕೂಡದೆ ಪೆಱಱಿಯದಂತೆ ಎಲ್ಲಿಯಾದೊಡಂ ನಾ್ ಕಾವನೆಂಬುದಂ ಮಱೆದಿರ್" ಎಂದು. ಇದರಿಂದ ಶಿವನಿಗೆ ಕಾಮ ನನ್ನು ಪ್ರತಿಭಟಿಸಲು ಶಕ್ತಿಸಾಲದೆ ಹೋಗಿ, ಬಡವನು ಕೋಪಕ್ಕೇ

ಡಾಗಿ ತುಟಿಯನ್ನು ಕಚ್ಚಿಕೊಳ್ಳುವಂತೆ "ಕೆಲವು ಕಾಲ ಪತ್ನಿಯಿಂದಗಲಿರು" ಎಂದು ಹೇಡಿತನದಿಂದ ಅಲ್ಪಶಾಪವನ್ನು ಕೊಟ್ಟನೆಂದು ಕವಿಯು ತಿಳಿಸಿದಂತಾಯಿತು. ಕೂಡಲೆ ಕಾಮನಿಗೆ ಶಾಪವಿಮೋಚನವಾಗಿ ಪತ್ನಿಯೊಡನೆ ಸಮಾಗಮವಾಯಿತೆಂದೂ ಹೇಳಿರುವನು. ಈ ಸಂದರ್ಭವನ್ನು ಪರಾಮರ್ಶಿಸಿ ನೋಡಿದ್ದಲ್ಲಿ ಕವಿಯು ವೀರಜೈನನೆಂದೇ ಹೇಳಬೇಕು. ಅದಕ್ಕನುಸಾರವಾಗಿ ಗ್ರಂಥಾಂತ್ಯದ ಮಂಗಳದಲ್ಲಿ "ಅರುಹಂತಂ ನಲ್ಮೆಯಿಂ ಮಾಡ್ಕೆ ಬೇಡಿದುದಂ ತನ್ನಱವಟ್ಟಿಗರ್ಗೆ" ಎಂದು ಹೇಳಿಯೂ ಇದ್ದಾನೆ.†



ಮಹಾಕವಿ ಆಣ್ಡಯ್ಯಪ್ರಣೀತಂ

# ಕಬ್ಬಿಗರ ಕಾವಂ



ಆವನ ಗಾಡಿ ನೋಡಿದವರಂ ಸಲೆ ಸೋಲಿಸುತಿರ್ಪುದುರ್ಕಿನಿಂ ।
ದಾವನ ಪೂವಿನಂಬದಟರಂ ತಲೆವಾಗಿಸುತಿರ್ಪುದೇೞ್ಗೆಯಿಂ ॥
ದಾವನ ಪಜ್ಜಳಿಪ್ಪ ಜಸಮೆಣ್ದೆಸೆಯೊಳ್ ನೆಲಸಿರ್ಪುದಾತನಿಂ ।
ಗಾವಗಮೆನ್ನ ಜಾಣ್ನುಡಿಗೆ ಮೆಯ್ಸಿರಿಯಂ ನನೆವಿಲ್ಲಬಲ್ಲಹಂ ॥೧॥

[1]ಸಿರಿಯರಸಂ ಮಾದೇವಂ ।
ಸರಸತಿಯೆಱೆಯರ್ಕಳಡಿಗಳೆಂಬೀಕೆಂದಾ ॥
ವರಿಗಳ್ ಪೊರೆಗೆಮ್ಮಂ ಪೊಸ ।
ಸಿರಿಗಂಪಿಂ ಪೞಮೆವೞಿಯ[2]ನೆಂತಂತೊಲವಿಂ ॥೨॥

ಗರುವಿಕೆ[3]ಗಿಂಬು ಗಾಡಿಗೆ ತವರ್ಮನೆ ವ್ಯೆಮೆಗೆ ಮೇರೆ ನನ್ನಿಗಾ ।
ಗರಮಱುತಕ್ಕೆ ಗೊತ್ತು ಪೆಸ*ರ್ವೆತ್ತ[4]ನೆಗೞ್ತೆಗೆ ತಾಣಮಾಗಿ ಬ ॥
ಲ್ಲರ ಬಗೆಯಲ್ಲಿ ಕೂಡಿ ನೆಲಸಿರ್ದು ಪೊಗೞ್ತೆಯನಾಂತಳಾವಳಾ ।
ಸರಸತಿ ಕೂರ್ಮೆಯಿಂ[5]ದೊಸೆದು ಮಾಡುಗೆ ಕಬ್ಬದ ಬರ್ದಿನೇೞ್ಗೆಯಂ ॥

ಎನ್ನೀಕಬ್ಬದೊಳೆಂದುಂ ।
ಸನ್ನಿದಮಾಗಿರ್ಕೆ [6]ಕಣ್ಣಮಯ್ಯನ ಕಡುಜಾಣ್ ॥
ರನ್ನನ ಮೆಯ್ಸಿರಿ ಗಜಗನ ।
ಬಿನ್ನಣಮಗ್ಗಳನ ಕಾಣ್ಕೆ ಜನ್ನಿಗನ ಜಸಂ ॥೪॥

---

1. ಸಿರಿಯೆರೆಯಂ ಗ॥ 2. ಗಳಂತೊಲವಿಂ. ಕ॥ 3. ಗಿಂಪು. ಗ॥
4. ನೆಗಳ್ಕೆಯ. ಗ॥ 5. ದೊಲಿದು. ಕ॥ 6. ಕಣ್ಣಪಯ್ಯ. ಖ॥

[1]ಒಪ್ಪಂಬೂಸಿದವೋಲ್ ತೆಱಂಬೊಳೆವ ಕೊಂಕುಂ ಪಾಲೊಳೊಂದಿ
[ರ್ಪವೋ ।
ಲೊಪ್ಪಂಬೆತ್ತಿನಿದಾದ ಬರ್ದುನುಡಿಯುಂ ತಳ್ತೋಜೆಯುಂ ನಿಲ್ವಿನಂ ॥
ತಪ್ಪೊಂದುಂ ತಲೆದೋಱದಂತೆ ಪಲರೆಲ್ಲರ್ ತಿರ್ದಿದೀಕಬ್ಬಮೆಂ ।
ತಪ್ಪಂಗಂ ಪೊಸಮುತ್ತಿನೆಕ್ಕಸರದಂತೆಂದುಂ ಕೊರಲ್ಗೊಳ್ಳದೇ? ॥೫॥

ಪುರುಳುಂ ಲಕ್ಕಣಮುಂ ಮೆ ।
ಯ್ಸಿರಿಯುಂ ತಳ್ತಸೆಯೆ ಪೇೞ್ದ ಕಬ್ಬಮದೆಂತುಂ ॥
ಪುರುಳುಂ ಲಕ್ಕಣಮುಂ ಮೆ ।
ಯ್ಸಿರಿಯುಂ ತಳ್ತಸೆವ ರನ್ನದಂತೆ*ರ್ದವುಗದೇ? ॥೬॥

ಕನ್ನಡ[2]ದೊಳ್ಪಿನ ನುಡಿಯಂ ।
ಮುನ್ನಿದಱೊಳೆ ನೋಡಿ ತಿಳಿದುಕೊಳ್ವುದು ಚದುರಂ ॥
ರನ್ನದ ಕನ್ನಡಿಯಂ ನಲ ।
ವಿನ್ನೋಡಿದವಂಗೆ ಕುಂದದೇನಾದಪುದೇ? ॥೭॥

ಸೊಗಯಿಸುವ ಕಬ್ಬಮಂ ಕ ।
ಬ್ಬಿಗರಲ್ಲದೆ ಮೆಚ್ಚರುೞಿದರೇನಱಿವರೆ? ತುಂ ॥
ಬಿಗಳಲ್ಲದೆ ಪೂವೊೞ್ ಮಗ ।
ಮಗಿಸುವ ಕಂಪಂ ಕಡಂದುಱೇನಱಿದಪುದೇ ॥೮॥

ಎಱಗುವ[3]ನರುಹಂಗುೞಿದ ।
ರ್ಗೆಱಗಂ ಕನಸಿನೊಳಮೋದನಲ್ಲದೆ ಮೆಚ್ಚಂ ॥
ಮಱೆದುಂ ಪೆಱವೆಣ್ಣೊೞ್ ನೆರೆ ।
ದಱಿಯಂ ಲೆಕ್ಕಿಗರ ಪಿರಿಯನೆನಿಪಾಂಡಯ್ಯಂ ॥೯॥

---

1. ತುಪ್ಪಂ. ಗ॥ 2. ಬೆಳತಿನ. ಕ॥ 3. ನರಿವಂ. ಕ॥

ದಿಮ್ಮಿದರಕ್ಕರಕ್ಕಱಿವರೊಳ್ ನುಡಿಯೊಳ್ ಕಡುಜಾಣರಂದದೊಳ್ |
ಪೊಮ್ಮಿದರೊಂದಿ ನಿಂದ ಸಿರಿಯೊಳ್ ಪಿರಿಯರ್ಗೆಡೆಗೊಟ್ಟು ಬಾಳ್ವರಂ ||
[1]ದುಮ್ಮುಳಿವರ್ಗೆ ಕೇಳ್ [2]ಮುಳಿಯರಾತನ ಮಕ್ಕಳೆನಿಪ್ಪ ಸಾಂತನುಂ |
ಗುಮ್ಮಟನುಂ ಜಸಂಬಡೆದ ವೈಜಣನುಂ ನೆಱೆ [3]ಮೆಚ್ಚೆ ಮಾನಿಸರ್ ||

ಅವರೊಳ್ ನೋೞ್ಪೊಡೆ [4]ಮೊದಲಿಗ |
ನಿವನೆನೆ ಗುರುವಿಕೆಯನಾಂತ ಸಾಂತಂಗಂ [5]ಚೆ ||
ಲ್ವುವರಿವ ಬಲ್ಲವ್ವೆಗಮೊ |
ಪ್ಪುವ ಲೆಕ್ಕಿಗರರಸನೊಗೆದನೆಸೆವಾಂಡಯ್ಯಂ ||೧೧||

ಎಳವೆಂಡಿರುಟ್ಟ ದುಗುಲಮೆ |
[6]ತಳೆವುದು ಕಡೆಗಣ್ಣ [7]ಬೆಳಗು ಪೊಸಮೆಯ್ದೊಡವು ||
ಜ್ಜಳಿಪ ಮೊಗಂ ಕನ್ನಡಿಯೆನೆ |
ಬಳೆದನಿದೇನೆಂಬ ಸೊಬಗಿನೇೞ್ತರವವನಾ ||೧೨||

ಅರುಹಂತನ ಮೆಲ್ಲಡಿದಾ |
ವರೆಗಳ್ ಬಗೆಯಲ್ಲಿ ನಿಂದುವೆಂದೊಡೆ ನಲವಿಂ ||
ಸಿರಿವೆಣ್ಣವನೊಳ್ ನಿಚ್ಚಂ |
ಬೆರಸಿರ್ದಪಳೆಂಬುದಿಂತಿದೇನಚ್ಚರಿಯೇ ? ||೧೩||

ಎಳಗಿಳಿವಿಂಡಿನಂತೆ ಮಿಳಿ*ರ್ದಾಡುವ ತುಂಬಿಯ ಬಂಬಲಂತೆ ಕೆಂ |
ದಳಿ*ರ್ಗಳ ತೊಂಗಲಂತೆ ನಡೆನೋಡುವ ಪೆಂಡಿರ ನೋಟದಂತೆ ಪೂ |
ಗಳ ಪೊಸಗಂಪಿನೊಳ್ ಪೊರೆದು ತೀಡುವ ತೆಂಬೆಲರಂತೆ ತೋರ್ಪ ತಿಂ |
ಗಳ ಸಿರಿಯಂತೆ [8]ಸೋಲಿಸದೆ ಕಾವನ ಕಬ್ಬಮುದಾರನಾದೊಡಂ ||೧೪||

---

1. ದುಮ್ಮುಳಿಪರ್ಗೆ. ಗ|| 2. ಮುಳಿವ. ಗ|| 3. ಮೆಚ್ಚರಾರುಮಂ. ಗ||
4. ಪದವಿಗ. ಕ|| 5. ಚೆ||ಲ್ವರಿವಪ್ಪಬಲ್ಲವೆ. ಕ||
6. ಕಳೆವುದು. ಖ||ಗ|| 7. ಬೆಳ್ಪು. ಕ||
8. ಸೋಲಿಸುವುದಾತನ ಕಬ್ಬಮುದಾರ—ಕಾವ್ಯಸಾರದ ಪಾಠ.

ಸೊಗಯಿಪ ಸಕ್ಕದಂಬೆರಸಿದಲ್ಲದೆ ಕನ್ನಡದಲ್ಲಿ ಕಬ್ಬಮಂ |
ಬಗೆಗೊಳೆ ಪೇೞಲಾಱರಿನಿತುಂ ಸಲೆ ಮುನ್ನಿನ ಪೆಂಪನಾಳ್ದ ಕ ||
ಬ್ಬಿಗರದು ಮಾತನಾಡಿದಪೊ[1]ಲಂದವನಾಟ್ದಿರೆ ಬಲ್ಲ ನೆ |
ಟ್ಟಗೆ ದೊರೆಕೊಂಡುದಿಂತಿವನೊಳಲ್ಲದೆ ಕೇಳ್ ದೊರೆಕೊಳ್ಳದಾರೊಳಂ ||

ಎಂದು ತಮತಮಗೆ ಬಲ್ಲವ |
ರೆಂದೊಡೆ [2]ನಾನವರ ಬಯಕೆಯಂ ಸಲಿಸುವೆನಿ ||
ನ್ನೆಂದಚ್ಚಗನ್ನಡಂ ಬಿಗಿ |
ಪೊಂದಿರೆ ಕಬ್ಬಿಗರ ಕಾವನೊಲವಿಂದೊರೆದೆಂ ||೧೬||

ಸಿಂಗರಮೇಳ್ಗೆಯಂ ಪಡೆಯೆ ದೇಸೆ ಪೊದಟ್ದಿರೆ ಕೊಂಕು ತೀವೆ ಬ |
ರ್ದಿಂಗಳೊಳಗಾದ ಮಾತಮರೆ ಬಲ್ಲವರಾನೆ ಚೆಂದಮೊಂದಿ ಡಾ ||
ಳಂ ಗೆಡೆಗೊಂಡು ತೋಱೆ ನಸೆವಿಲ್ಲನ ಬೀರಮನೊಲ್ದು ಪೇೞ್ವನಾಂ |
ತಿಂಗಳ ಸೊಂಪು ಗುಂಪುವಡೆದೆಣ್ದೆಸೆಗಂ ಪರಿಗೊಂಡುದೆಂಬಿನಂ ||

ವಚನ|| ಅದೆಂತೆಂದೊಡೆ:—ಓರೊಂದೆಡೆಯ ಬೆಂಚೆಗಳೊಳರೆವಿರಿದ ನೀರ್ವೂಗಳ ಕಂಪಿಂಗೆ ಮಾಣದೆ ಮುಸುಱಿ ಮೊರೆವ ಪೆಣ್ದುಂಬಿಗಳ, ತುಂಬಿಗಳ ಬಟವಿಡಿದು ಬನದೊಳೆಡೆಯಾಡುವ ಸಬರಿಯರ ನಡೆಯ ನೇಡಿಸುವಂತೆ ಮೆಲ್ಲಡಿಯಿಡುವ ಪೆಣ್ಣಂಚೆಗಳ ಬಳಗಂಗಳ, ಗಳಗಳನೆ ಪಸರಿಸಿ ಪರಿದ ಬಯಲೊಳ್ ಬೆಳೆದ ಬಿಳಿಯ ಕರ್ಬಿನ ಕೋಲ್ಗೆ ಕೊರಲುದ್ದಮಾದೆಳನೀರ ಪೊನಲ, ನಲವಿಂ ಬೆಳೆಗೆಯ್ಗೆಱ[3]ಗುವ ಪಕ್ಕಿಗಳನಲೆದು ಸೋವ ನಾಡ ಗಾಡಿಕಾರ್ತಿಯರ, ಗಾಡಿಕಾರ್ತಿಯರ ಗಾಡಿಗೆ ಸೋಲ್ತು ನಿಲ್ವ ಬಟ್ಟೆಗರ, ಗರಗರಿಕೆವಡೆದೆಳವೆಂಡಿರ ತಂಡದಿಂ ನೆಗಟ್ತುವಡೆದು [4]ಮೇಲೂರ್ಗಳ ಮುಂಡಾಡುವಂತಾಗಸಕೆ ನೆಗೆದ ಬೀದಿವಾಡಂಗಳ, ಗಱ

1. ಲಿರ್ಪುದ. ಗ|| 2. ತಾನ. ಗ|| 3. ಪೋಪ. ಕ||
4. ಮೇಲೂರ್ಗಳೊಳಾಗಸಮಂ ಮುಂಡಾಡುವಂತೆ ನೆಗೆದ ನೆಲವಾಡಂಗಳ. ಕ||

ಪುವರಗಿಳಿಯ ಬಳಗಕ್ಕೆ ತವರ್ಮನೆಯಾದ ಮಾಮರದ ಕೊಂಬುಕೊಂಬಿನೊಳ್ ಬಿಡದೆ ಬಗ್ಗಿಪ ಕೋಗಿಲೆಗಳ ಚೆಲ್ವನೊಳಕೊಂಡಿರ್ಪುದು. ಅಂತುಮಲ್ಲದೆಯುಂ ||೧೮||

ಪಲವುಂ ನಾಲಗೆಯುಳ್ಳವಂ ಬಗೆವೊಡೆಂದುಂ ಬಣ್ಣಿಸಲ್ಕಾಱನಾ |
ನೆಲನಂ ಮತ್ತಿನ ಮಾನಿಸರ್ ಪೊಗಟಲೇನಂ [1]ಬಲ್ಲರೆಂಬೊಂದು ಬ ||
ಲ್ಲುಲಿಯಂ ನೆಟ್ಟನೆ ತಾಳ್ದು ಕನ್ನಡಮೆನಿಪ್ಪಾನಾಡು ಚೆಲ್ವಾಯ್ತು ಮೆ |
ಲ್ಲೆಲರಿಂ ಪೂತ ಕೊಳಂಗಳಿಂ ಕೆಱೆಗಳಿಂ ಕಾಲೂರ್ಗಳಿಂ ಕೆಯ್ಗಳಿಂ ||

ಇವು ಪಳ್ಳಿಗಳಿವು ಪಟ್ಟಣ |
ಮಿವು ಕೆಱೆಗಳಿವೆಱಗಿ ನಿಂದ ಮುಗಿಲೋಳಿಗಳಿಂ ||
ತಿವು ಕಾಡಿವು ಪೆಸರ್ವಡೆದೊ |
ಪ್ಪುವ ಬನಮೆಂದಱುದು ಪೇೞ್ವುದರಿದಾನಾಡೊಳ್ ||೨೦||

ಮಲ್ಲಿಗೆಯಲ್ಲದೆ ಸಂಪಗೆ |
ಯಲ್ಲದೆ ದಾಳಿಂಬಮಲ್ಲದೊಪ್ಪುವ ಚೆಂದೆಂ ||
ಗಲ್ಲದೆ ಮಾವಲ್ಲದೆ ಕೌಂ |
ಗಲ್ಲದೆ ಗಿಡುಮರಗಳೆಂಬುವಿಲ್ಲಾ ನಾಡೊಳ್ ||೨೧||

ಅಡರ್ದೇಱು ಕೋಡಗಂಗಳ್ |
ಕಡುಪಿಂದೀಡಾಡೆ ಘಟಿಲನೊಡೆದೆಳಗಾಯಿಂ ||
[2]ದೆಡೆವಿಡಿದೊಸರ್ವೆಳನೀರ್ಗಳ್ |
ಮಡುಗೊಂಡೋವುತ್ತುಮಿರ್ಪುವಲ್ಲಿಯ ಬನಮಂ ||೨೨||

ಉಱೆ ಕಾಯ್ವ ಬಿಸಿಲೊಳಿಮ್ಮಂ |
ಮಱೆದುಂ ಕೊರಗಿಸದೆ ಪೊರೆದುದೆಂದೊಲವಿಂ ಬಂ ||

---

1. ರೆಂದೆಂಬದೊಂ | ದುಲಿಯಂ. ಕ||
2. ಇದು ಕಾವ್ಯಸಾರದ ಪಾಠ. "ದೆಡೆವಿಡಿದಿಳವೆಳನೀರಿಂ | ಮಡುಗೊಂಡೊಪ್ಪುತ್ತುಮಿರ್ಪುವಲ್ಲಿಯ ಬನಗಳ್ ||" ಎಂಬುದು ಕ||ಗ|| ಪಾಠವು.

ದೆಱಗುವವೊಲ್ ತೆನೆಯಂ ಕಾ |
ಲ್ಗೆಱಗುವ ಕಟವೆಗಳವೆಲ್ಲಿಯುಂ ಸೊಗಯಿಸುಗುಂ ||೨೩||

ನೆಯ್ದಿಲ್ಗೊಳಂಗಳೆಡೆಯೊಳ್ |
[1]ಕಾಯ್ದೊಲವದೆ ಪೊರ್ವ ಪಲವು ನೀರ್ವಕ್ಕಿಗಳಿಂ ||
[2]ದೆಯ್ದುಣ್ಬವ ಸೀರ್ಪನಿಯೊಳ್ |
ತೊಯ್ದೊಯ್ಯನೆ ಗಾಳಿ ಕೂಡೆ ತೀಡುತ್ತಿರ್ಕುಂ ||೨೪||

ವ|| ಮತ್ತಮಾನಾಡೊಳ್ ಕೀಲೆಂಬುದು ಕುದುರೆಯ ಬಾಯ ಕಬ್ಬಿಣದೊಳ್, ಕವರೆಂಬುದು ಚಪ್ಪರದೊಳ್, ಬಂದಿಯೆಂಬುದು ತೊಡವಿನೊಳ್, ಏಱೆಂಬುದು ನೆಲೆವಾಡದೊಳ್, ಮಡಿಯೆಂಬುದು ಮರುಗದ ತಾಣದೊಳ್, ಮೊಱೆಯೆಂಬುದು ನಂಟರೊಳ್, ಪೊಡೆಯೆಂಬುದು ಬೆಳೆಗೆಯ್ಯೊಳ್, ಕಱೆಯೆಂಬುದು ತುಱುಗಾರ್ತಿಯರೊಳ್, ಪಿಡಿಯೆಂಬುದು ಪೆಣ್ಬಾನೆಯೊಳಲ್ಲದಿಲ್ಲಂತುಮಲ್ಲದೆಯುಂ ||೨೫||

ಪುದಿದೆಳವಳ್ಳಿಯಿಲ್ಲದ ಮರಂ ಕೊಳನಿಲ್ಲದ ತೋಂಟ[3]ಮಾವಲಿ |
ಲ್ಲದ ಕೆಱೆ ಗಂಡುಗೋಗಿಲೆಗಳಿಲ್ಲದ ಬಂದೆಳಮಾವು ಕಾಲ್ಗಳಿ ||
ಲ್ಲದ ತೊಱೆ ತುಂಬಿಯಿಲ್ಲದಲರಂಚೆಗಳಿಲ್ಲದ ಬೆಂಚೆ ಬೇಟಮಿ |
ಲ್ಲದ ಬೆಲೆವೆಣ್ಗಳಿಲ್ಲ ಪೆಸರಿಲ್ಲದ ಮಾನಿಸರಿಲ್ಲದೆಲ್ಲಿಯುಂ ||೨೬||

ತಾವರೆಯ ಮಲ್ಲಿಗೆಯ ಪೊಸ |
ಸೇವಂತಿಯ ಬಿರಿದ ಸಂಪಗೆಯ ತನಿಗಂಪಿಂ ||
ತೀವಿ ಪುರ್ದಱಿಂ[4]ದೆಂದುಂ |
ಪೂವಿನ ಪೊಟಲೆಂಬುದೊಂದು [5]ಪೆಸರೆಸೆದಿರ್ಕುಂ ||೨೭||

---

1. ಕಾಯ್ದಾಯೆಡೆಪಾರ್ವ. ಗ||, ತೋಯ್ದೊಲವದೆ ಪೀರ್ವ—ಕಾವ್ಯಸಾರದ ಪಾಠ.
2. ದೆಯ್ದುವ ಸೀರ್ಪನಿ ಪನಿಯೊಳ್—ಕಾವ್ಯಸಾರದ ಪಾಠ.
3. ದಾವರಿಲ್ಲದ. ಖ||, ದಾವಿಯಿಲ್ಲದ. ಗ|| 4. ಪಿಂದಂ. ಕ|| 5. ಪೆಸರ್ಗೆಸೆ. ಕ||

ತೊಳಗುವ ಕರುಮಾಡಂ ನೊರೆ |
ಬಳಸಿದ ಪೊಂಗೋಂಟೆ ಮೇರೆ ನೆಲೆವನೆ ಸೊಗಯಿ ||
ಪ್ಪೊಳಗಣ ಬೆಟ್ಟುಗಳೆನೆ ಬಗೆ |
ಗೊಳಿಪುದು ಮುನ್ನೀರ ತೆಱದಿನಾಪೊೞಲೆಂದುಂ ||೨೮||

ಬಳಸಿದ ಬಳ್ಳಿಯ ಜೊಂಪಂ |
ಗಳ ಮಿಸುವೆಳದಳಿರ ಕಾವಣಂಗಳ ಪೊಸವೂ ||
ಗಳನಾಂತ ಮಲ್ಲಿಗೆಯ ಮನೆ |
ಗಳ ಚೆಲ್ವಿಂ ಚೆಲ್ವನಾಂತುದಾಪೊೞಲ ಬನಂ ||೨೯||

ವ|| ಮತ್ತಮಲ್ಲಿಯ ಬನಂ ಮುಗಿಲೆಡೆಯೊಳೆಡೆವಿಡದೆಡೆಯಾಡಿ ಬೞಲ್ದ ಬಿಜ್ಜೋದರಿಯರ್ಕಳೞವಟ್ಟಗೆದಾಣಮೆಂಬಂತೆಸೆವೆಳನೀರ್ಗಳಂ ಪೊತ್ತ್ತುಗಸೆ[1]ದೆಡೆಗಡರ್ವ ಚೆಂದೆಂಗಿನ ಮರಂಗಳೊಳಂ, ಎಸಗುವೆಲರಿನೊಡೆದೊಸರ್ವ ಪೊಸವಣ್ಣ ಪಸರದಿನೆಸೆವಸಿಯಕೊಂಬನಿಂಬುಮಾಡಿ ಸುೞಿದು ಗೞಪುವೆಳಗಿಳಿಯ ಬಳಗಕ್ಕೆ ತವರ್ಮನೆಯಾದಿವ್ಮಾವಿನ ಪೊದಱೊಳಂ, ಒಱಲ್ದೆಱಗುವ ಪಱಮೆವಱಗಳಂ ತುಱುಸೆಱೆವಿಡಿವ ನಱುಗಂಪಿನ ಸೊಂಪುಗಳ್ಗಂಬಾದ ಪೊಂಬಾಡಗಳಿಂ ಬಳ್ಕುವಡಕೆಯ ಸಾಲ್ಗಳೊಳಂ, ಒಯ್ಯನೊಯ್ಯನೆ ರಯ್ಯಮಾಗಿ ಮೆಯ್ಯೞಿಯದುಯ್ಯಲಾಡುವ ಸೊಂದಿಗೋಡಗಂಗಳಿಂದೋರೊರ್ಮೆ ನೆಲಕ್ಕೆ ಜೋಲ್ವ ತಿಂತಿಣಿವಣ್ಣನಾಂತ ಸಣ್ಣಗೊಂಬಿಂದಿಂಬುವಡೆದ ದಾಳಿಂಬಂಗಳೊಳಂ, ಬಂದುಬಂದು ನಟ್ಟನಡುವಗಲೊಳೋಕುೞಿಯಾಡುವೆಳವೆಂಡಿರ ಮೆಯ್ಯ ಕುಂಕುವದಿಂದೊಂದಿದ ಕೆಂದಾವರೆವೂಗಳಂ ತಳೆದು ಸೊಂಪನೊಳಕೊಂಡ ತಾವರೆಗೊಳಂಗಳೊಳಂ ಬಸಂತಂಗೆ ನೆಲೆವೀಡಾಗಿರ್ದುದಂತು ಮಲ್ಲದೆಯುಂ ||

ಮೊರೆವೆಳದುಂಬಿಯ ನಲವಿಂ |
ನೆರೆವಂಚೆಯ ನುಡಿವ ಗಿಳಿಯ ಕಿವಿಗಿನಿದಪ್ಪಂ ||

---

1. ಕ್ಕೆ ನೆಗೆವ. ಕ||

ತಿರೆ ಕರೆವ ಕೋಗಿಲೆಯ ನು |
ಣ್ಚರದಿಂದಂ ಬಿರಿಯಿಗಳ್ಗೆ ಮಾಡುವುದಟಲಂ ||೩೧||

ಕನ*ರ್ಗೊನರೆಲ್ಲಿಯಲ್ಲಿ ಮಿಳಿ*ರ್ದಾಡುವ ನುಣ್ದಳಿರೆಲ್ಲಿಯಲ್ಲಿ ಬ |
ಲ್ನನೆಗಳವೆಲ್ಲಿಯಲ್ಲಿ ಪೊರೆದೋಱುವ ಮೊಗ್ಗೆಗಳೆಲ್ಲಿಯಲ್ಲಿ ಚೆ ||
ಲ್ವಿನಿಪಲರೆಲ್ಲಿಯಲ್ಲಿ ಪಸುರೇಱುದ ಕಾಯ್ಗಳವೆಲ್ಲಿಯಲ್ಲಿ ಪ |
ಣ್ಗೊನೆಗಳವೆಲ್ಲಿಯಲ್ಲಿಯೆನೆ ಸೋಲಿಸುಗುಂ ಬಿಡದಾವನಂ ಬನಂ ||೩೨||

ತಿಳಿದ ಕೊಳಂಗಳೊಳ್ ಸುಟಿದು ಸೀರ್ಪನಿಯಂ ಬಿಡದೆತ್ತಿಕೊಂಡು ಪೂ|
ಗಳ ಪೊಸಗಂಪಿನೊಳ್ ಪೊರೆದು ತುಂಬಿಗಳಿಂಚರದಲ್ಲಿ ತಳ್ತು ಕೆಂ ||
ದಳಿ*ರ್ಗಳ ತೊಂಗಲೊಳ್ ತೊಡ*ರ್ದು ಕೂಡುವ ನಲ್ಲರ ನೀಳ್ದ [ಸೇದೆಯಂ |
ಸೆಳೆದೆಲರಲ್ಲಿ ತೀಡುವುದು ಮೆಲ್ಲನೆ [2]ಮೆಲ್ಲನೆ ರಯ್ಯವೆಂಬಿನಂ ||೩೩||

ವ|| ಅಂತು ನೋಟ್ಪರ ಬಗೆಯಂ ಬಲ್ಸೆಱೆವಿಡಿವ ಬನಮಂ ಬಳಸಿ ವಿಳಸವಾದ ಪೊಂಗೋಂಟೆಯಿಂದೊಳಗೆ ||೩೪||

ಕಣ್ಗೆಂಬಾದುದು ರಾಯಬೀದಿ ಮುಡಿಯಿಂದಂ ಬೀಳ್ವ ಪೂಮಾಲೆಯಿಂ|
[3]ತಣ್ಗಂಪಂ ಸವಿದಲ್ಲಿ ವಂಗಡದೆ ಪಾಡುತ್ತಿರ್ಪ ಪೆಣ್ದುಂಬಿಯಿಂ ||
ನುಣ್ಗಾಲುಂಗುರವೀಯೆ ಮೆಲ್ಲುಲಿಯನೆತ್ತಂ ಬರ್ಪ [5]ಬಲ್ವೆಂಡಿರಿಂ |
ಜಾಣ್ಗೆಂಬಾದರವೆಂಡಿರಿಂ ಪೊಗಟ್ವರೋದಂ ಕೇಳ್ವ ಕೂರಾಳ್ಗಳಿಂ||೩೫||

ಮುತ್ತುಂ ಪಚ್ಚೆವರಲ್ಗಳುಂ ಕುಳಿಸಮುಂ ಮುಂತಾಗಿ ಕುಂದಿಲ್ಲದೊಂ |
ಬತ್ತುಂ ರನ್ನದ ನುಣ್ಗದಿರ್ ನೆಗೆದು ನೀಳ್ದೊಂದೊಂದಱೊಳ್ ಕೂಡಿ ಮೆ||
ಯ್ವೆತ್ತಿರ್ದಿಂದಿರವಿಲ್ಲ ಪಾಂಗನೆನಸುಂ ಬಾಂಬಟ್ಟೆಯೊಳ್ ಬೀಱೆ ಕ |
ಣ್ಗೆತ್ತಂ ಸೋಲಮನೀವ ರನ್ನವಸರಂ ಚೆಲ್ವಾದುದಾಬೀದಿಯೊಳ್||೩೬||

---

1. ಯೆಳಗಾಯ್ಬುಲುಗಾಯ್ಗಳವೆಲ್ಲಿ. ಕ|| 2. ಮೆತ್ತನೆಯೂಬನಂಗಳೊಳ್. ಕ||
3. ಮಣ್ಗಂಪಂ—ಕಾವ್ಯಸಾರಪಾಠ. 4. ಪೆರ್ವೆಂಡಿರಿಂ. ಕಾವ್ಯಸಾರಪಾಠ.

ತೊಳಗುವ ಪೂಗಳನೆಂದುಂ |
ತಳೆದಿರ್ಪ ಕೊಳಂಗಳೆಂಬ ಸಂಕೆಯನೆನಸುಂ ||
ಬಳೆಯಿಸುತಿರ್ಪುದು ಬೀದಿಗ |
ಳೊಳಗೆಲ್ಲಂ ನೆಗ*ಟ್ದ ಕಂಚುಗಾಱರ ಪಸರಂ ||೩೭||

ಮಿಗೆ[1] ಬೆಳೆಯೇಱುದ[2] ಪೂಲಿಯ |
ಮಗರಿಯ ದೋರಿಯದ ಪಟಿಯ [3]ತಳಿ*ರ್ವಟ್ಟಿಯ ಕಾ ||
ಡಿಗೆನೀರಿನ [4]ಬಟ್ಟೆಯ [5]ಮಟಿ |
ಗೆಗಳಿಂ ಸೋಲಿಪುವು ಸೀರೆವರದರ ಪಸರಂ ||೩೮||

ವ|| ಅಲ್ಲಿಂಬಟಿಯಮುಣ್ಮಿ ಪೊಣ್ಮುವ ನಱುಗಂಪಿನ ಪಸರದಂತೆ ಪಸರಿಸಿದ ತಂತಮ್ಮ ಕಾವಣಂಗಳ ಮುಂದೆ ||೩೯||

ಮಗಮಗಿಸುತ್ತುಮಿರ್ಪ ನಱುಸುಯ್ ಪೊಸಪೂಗಳ ಕಂಪನೆತ್ತಿ ನು |
ಣ್ಮೊಗಮಿರದಚ್ಚದಾವರೆಯ ಮೆಯ್ಸಿರಿಯಂ ಪಿಡಿದೆತ್ತಿ ನೀಳ್ದ ಸೆ ||
ಳ್ಳುಗು*ರ್ಗಳ ಬೆಳ್ಪು ಕೇದಗೆಯ ಕುತ್ತಿಸಳೋಳಿಯನೆತ್ತಿ ಸುತ್ತಲುಂ |
ಸೊಗಯಿಸುತಿರ್ಪ ಬಾಸಿಗಮನೆತ್ತುವರಗ್ಗದ ಮಾಲೆಗಾರ್ತಿಯರ್||೪೦||

ವ|| ಅಂತು ಸೊಬಗಿಂಗೊಳಗಾಗಿ ಪುಲ್ಲವಡಿಗಿತಿಯರ ಪಸರ ದಿನಂದಂಬಡೆದ ಸೂಳೆಗೇಱಿಯ ಕೆಲದಲ್ಲಿ ||೪೧||

ಗರುವರ ಗೊಟ್ಟಿಗಾಱರ ನೆಗಱ್ತೆಯ ಮಿಂಡರ ಮೇಳಗಾಱರ |
ಕ್ಕರಿಗರ ಸಂದ ಕಬ್ಬಿಗರ ಜೋಡೆಯ ಬಂಡರ ಸಾರ್ದ ನೆತ್ತಗಾ ||
ಱರ ಚದುರಂಗಕಾಱರರೊರೆಗಾಱರ ಬಾಜಿಪ ಬೀಣೆಗಾಱರಾ |
ಗರಮೆನೆ ಪೆಂಪುಸೊಂಪನೊಳಕೊಂಡೆಸೆದಿರ್ಪುವು ಸೂಳೆಗೇಱುಗಳ್ ||

---

1. ಬಗೆ. ಕ|| 2. ಪುಲ್ಲಿಯ. ಕ|| 3. ತಳ. ಗ||
4. ಪೊಲ್ಲಿಯ. ಗ|| 5. ಮಳ| ಗೆಗಳಿಂ. ಕ||, ಮಗ| ವೆಗಳಂ. ಗ||

ಕಡಲೊಡೆಯನಿತ್ತ ರನ್ನದ |
ತೊಡವಂ ತುಡು ಸೌರಿಯಿತ್ತ ಪೊಂಬಟ್ಟೆಯನಿಂ ||
ದುಡು ಸಸಿಯಟ್ಟಿದ ಪೂವಂ |
ಮುಡಿಯೆಂಬೀನುಡಿಯೆ ಸೂಳೆಗೇಱುಯೊಳೆಲ್ಲಂ ||೪೩||

ವ|| ಮತ್ತಮಾಪಟ್ಟಣವಿಟ್ಟಣಂಬಡೆದು ಮೆಱೆವ ಪೊಂಬೆಸದು ಪ್ಪರಿಗೆಯ ಬಿಸವಂದವಾದ ಚುಂಚುಲೋವೆಗಳೊಳಗೆ ಬಳಸಿ ನಲಿದು ಲಿವ ಪಾರಿವಂಗಳ ಕೊರಲುಲಿಯೊಳಂ, ಪುಲ್ಲವಡಿಗಿತಿಯರೆತ್ತಿ ಪಿಡಿದ ಮಾಲೆವೂವಿನ ನಱುಗಂಪಿಂಗೆ ಕವ್ವರೆಗೊಂಡು ಮುತ್ತಿ ಮುಸುಱು ಮೊರೆ ವ ಮಱುದುಂಬಿಗಳಿಂಚರದೊಳಂ, [1]ಜೂದಿನ ದಿಣ್ಣೆಯೊಳ್ ಜೂದಾಡಿ ಗೆಲ್ದು ಕೈಕೊಂಡ ಪೊನ್ನರಾಸಿ[2]ಗಳ ವಾರುವಂಗಳ [3]ಪೇರಾನೆಗಳ ತೇರ್ಗಳ ವಂಗಡಮಂ ತಂಡತಂಡದಿಂ ಬೀಯಂಗೆಯ್ವರಸುಮಕ್ಕಳ ಮುಂ ದೋದಿ ಮೆಚ್ಚಂ ಕೊಳ್ವಕ್ಕರಿಗರಬ್ಬರದೊಳಂ, ಓಲಗದವಸರಮನಱುದ ರಮನೆಗೆ [4]ಪೋಪ ಬರ್ಪ ಮನ್ನೆಯರ ಮಾಸಾವಂತರ ಪಸಾಯ್ತರ ಬಟಿಸಲ್ವ ತುಟಿಲಾಳ್ಗಳಡ್ಡಣದೊಳೆಡ್ಡಮಾಗೆ ಕೀಲಿಸಿದ ಕಿಱುಗೆಜ್ಜೆಯ ದನಿಗಳೊಳಂ, [4]ನೀರುಣಲೆಂದು ಪೊಱಮಟ್ಟು ಕೆಂದೂಳಿಯನೊಟ್ಟಿ ಕೊಳಲೆಂದು ನಿಂದು ನಿಂದು ನೆಲದ ಸೊವಡನಾರಯ್ದು ಮಸಗಿ ದೆಸೆ ದೆಸೆಗೆ ಪಿಸಟಂಬರಿದು ಮನ್ನಣೆಯ ಮಾವಂತರುಮನಾರೆಕಾಱರುಮಂ ಮಿಾಱು [5]ಗೆಂಟಱೊಳ್ ನಿಂದು ನೋಡುವ ನುಡಿಗೆ [6]ಗಿಱ್ರನೆಯ್ದುವ ಸೊರ್ಕಾನೆಗಳ ಕಾಲ ಸಂಕಲೆಯ ಗೋಸದೊಳಂ ಇಂದಿರನ ಪೊಱಲ ಸಿರಿಯ ಸಡಗರಮಂ ಪಿಡಿಯುತಿರ್ಪುದು. ಅಂತುಮಲ್ಲದೆಯುಂ ||೪೪||

ನಲವಿಂದಿರುಳಂ ಪಗಲುಂ |
ನೆಲನೆಲ್ಲಂ ಬಾಬ್ವುದೀತನಾದ ಬಟಿಕ್ಕೆಂ ||

1. ಜಾದಿನ ದಿಂಟೆ ಖ|| 2. ಗಳೊಳಂ. ಗ|| 3. ಪೆಸರಾನೆ.
4. ತಿರುಗೊಲ್ಪೊರ. ಗ|| 5. ಗೆಂಟನೊಳಗಿರ್ದುಕೂಗುವ. ಖ|| 6. ನೀರೆಯ್ದುವ. ಕ||

ದುಲಿಯೆ ಸಲವುತ್ತುಮಿರ್ಪಂ |
ತೊಲಗದೆ ನನೆಯಂಬನೆಂಬನಂತಾಪೊಬಲಂ ||೪೫||

ಜಸಮೆಳೆಯೆಲ್ಲಮಂ ಬಳಸೆ ಬಲ್ಪು ನೆಗಟ್ತಯ ಬೀರರಂ ಝಳಂ |
ಪಿಸೆ ಕಡುನನ್ನಿ ಬಂದು ಸರಣೆಂದವರಂ ತಲೆಗಾಯೆ ಚಾಗದೊಂ ||
ದೆಸಕವಲಂಪಿನಿಂ ಬಡವರಂ ತಣಿವುತ್ತಿರೆ ತಕ್ಕರೊಲ್ದು ಬ |
ಣ್ಣಿಸೆ ನನೆಯಂಬನೆಯ್ದೆ ನೆಲನಂ ಬಲದೋಳ್ವಲಿಯಲ್ಲಿ ತಾಳ್ದಿದಂ ||

ನುಡಿ ಸಲೆ ನನ್ನಿಗಿಕೆವನೆಯಾದುದು ಜೌವನದೇಟ್ಗ [1]ಕಯ್ಗೆ ಕ |
ನ್ನಡಿಯೆನಿಸಿತ್ತು [2]ಪೆಂಪು ಪಿರಿಯರ್ಗೆಡೆಗೊಟ್ಟುದು ಗಾಡಿ ರೂಡಿಯಂ ||
ಪಡೆದುದು ಬೀರವುಗ್ಗಡದ ಸೈರಣೆಗಾಗರವಾಯ್ತು ನೋಡ್ಪೊಡೆಂ |
ದಡಿಗಡಿಗೊಲ್ದು ಬಣ್ಣಿಸುವುದಾನನೆಯಂಬನ [3]ಪೆರ್ಮೆಯಂ ನೆಲಂ ||

ಪಗೆಗಳುಮಂ ಪೆಂಡಿರುಮಂ |
ಮಿಗೆ ಸೋಲಿಪುವವನ ಬೀರಮುಂ ಗಾಡಿಯುವಾ ||
ವಗಮಡಿಸಿ ತಾಗೆ ಕಣೆಯುಂ |
ಮುಗು*ಳ್ಗಣೆಯುಂ ಮೊನೆಯೊಳಂ ಪೊಬಲ್ವೀದಿಯೊಳಂ ||೪೮||

ಪಡಿಮೊಗವಾಗಲೊಡಂ ಕ |
ನ್ನಡಿಯಂ ನೋಡುವರ ತೆಱದೆ ಮೆಯ್ಗುಂದುವರು ||
ಗ್ಗಡದರಸುಮಕ್ಕಳೆನೆ ಬಾ |
ಳ್ವಡಿದಾರ್ ಬಾಳ್ದಪ್ಪರಾತನಿದಿರೊಳ್ ಪಗೆವರ್ ||೪೯||

ಕಡುಗಲಿ ನನೆಯಂಬನ ಬೆ |
ಳ್ಗೊಡೆಯೆತ್ತಿದ ಬಟಿಯುಮುಟಿದ ರಾಯರ ಕೊಡೆಗಳ್ ||
ಗಡಣದೊಳೆ [4]ತಳೆದಣಂಬೆಯ |
ಕೊಡೆವೋಲ್ ಬೆಳ್ಗೊಡೆಗಳಾದುವದನೇವೊಗ*ಟ್ವಂ ||೫೦||

---

1. ಸಿಳ್ಗೆ. ಕ|| 2. ಸೊಃಪು. ಕ|| 3. ನೊಮ್ಮೆಯುಂ. ಕ|| 4. ಮೆರೆವಣಂಬೆ. ಗ||

ವ|| ಮತ್ತಮಾತಂ ತಾವರೆಯಂತೆ ಸಿರಿಯೊಳೊಂದಿಯುಂ ಪ್ರೊಡೆಯುಲರನೆನಿಸಂ; ಸಿಡಿಲಂತೆ ಕಾಯ್ಪನಾಂತುಂ ಬಿಸುಗದಿರನೆನಿಸಂ; ಬಿಲ್ಲಾಳಿನ ಕೈಯಂತೆ ಮಿಸುಪ ಸರದಿನಳವಟ್ಟುಂ ಮಾಲೆಗಾಱನೆನಿಸಂ; ಪಾರ್ವರ ಕೇಱಿಯಂತೆ ಚೆಂದಂಬಡೆದ ಮಡದಿನೆಸೆದುಂ [1]ತೀರೆನಿಸಂ; ಬಾನಂತೆ ಮಿನ್ಗಳಂ ತಳೆದುಂ ಮುನ್ನೀರೆನಿಸಂ; ಮಾವಿನಂತೆ ಕೋಡುಗೈಯೊಂದಿಯುಂ ಸೊರ್ಕಾನೆಯೆನಿಸಂ; ಎಂಬ ನೆಗಟ್ತೆಯಂ ಪೆತ್ತು ಪಲವುಂ ಪಗಲ[2]ರಸುಗೆಯ್ಯುತ್ತುಮಿರ್ಪನ್ನೆಗಂ ||೫೧||

ಒಲವಿಂದೋಲಗಿಸುವೆನೀ |
ನೆಲದೆಱೆಯನನೆಂದು ಬರ್ಪವೋಲ್ ಬಗ್ಗಿಪ ಕೋ ||
ಗಿಲೆಯ ತೊದಳ್ನುಡಿ ಬಿರಯಿಯ |
ನಲೆಯುತ್ತಿರೆ ಬಿಡದೆ ಬಂದುದಂದು ಬಸಂತಂ ||೫೨||

ಬಿರಯಿಗಳಂಜಿ [3]ತಾಱೆ ಪಗಲ್ಮಾಣನ ಮೆಯ್ ಬಿಸುಪೇಱೆ ಮಾಗೆ ಚಿ |
ಚ್ಚರದೊಳೆ ಪಾಱೆ ನೀರ್ದಗೆದು ಬೆಂಚೆಗಳೊಳ್ ಕೆಸಱಾಱೆ ತುಂಬಿಗಳ್ ||
ಮೊರೆದಲರತ್ತ ಚಾಱೆ ನನೆಯಂ ತರದಿಂದದಿ*ರ್ಮುತ್ತೆ ಪೇಱೆ ತಾ |
ವರೆ ತಲೆದೋಱೆ ತೀಡಿದುದು ತೆಂಕಣ ಗಾಳಿ ಬಸಂತದೇಟ್ಗೆಯೊಳ್ ||

ವ|| ಮತ್ತಂ ಕೆಲಬಲದ ಕೆಱೆವೆಟ್ಟನೊಳ್ ಪುಟ್ಟಿದ ಬೇವುಬೊಬ್ಬುಲಿಗಳಂ ತನ್ನಂತೆ ಮಾಳ್ಪ ಸಿರಿಕಂಡವೆಟ್ಟನೊಳ್ ಪುಟ್ಟಿಯುಂ, ಸೊಂದಿಗೋಡಗಂಗಳ ಕಾಲಾಟದಿನಲ್ಲೊಕ್ಕಲರಿನುದಿರ್ದ ದೂಳಿಗಳನಮರ್ಚಿಯುಂ, ಕಿಬ್ಬರಿಗಳೊಳ್ ಬೆಳೆದಸುಗೆಯ ಬನಮನಿರ್ಕೆಮಾಡಿ ಬಿಡದೂಟ್ವ ಪೆಣ್ಗೋಗಿಲೆಯ ಸರಂಗಳಿಂ ತೊದಳ್ನುಡಿಯಂ ಬೀಱಿಯುಂ, ಎಡೆವಿಡದೆ ಕಡಲ ತಡಿಗಳೊಳ್ ಪೊಂಬಾಱಯ ಕಂಪು ಪೊಂಪುಟವೋಗೆ ನೆಗೆದ ಕೌಂಗಿನ ಸಾಲ ಸಂದಣಿಯೊಳ್ ನಿಱುಗಱುಗಂಪನಾಡಿಯುಂ, ಪಟ್ಟಣಂ

1. ಮುಗಿಲೆ, ಗ||, ನೀರ್ದೇರೆ, ಖ 2. ರಸುತನಂ, ಗ|| 3. ಸಾರೆ, ಗ||

ಗಳ ಪೊೞವೊಲ ತೋಂಟಂಗಳೊಳ್ ಬೇಱೂರ್ಗೆ ಪೋದ ನಲ್ಲರ ನೆನೆದು ದೂಱುಸುವ ನೀಱೆಯರ ನಿಡುಸುಯ್ಯ ಗಡಣದಿಂ ಜೌವನ ವೇಱಿಯುಂ, ಸೊಬಗುವಂ ಗಾಡಿಯುಮನೊಳಕೊಂಡು ತಿರುಗುವೆಳ ವೆಂಡಿರ ಬಟ್ಟವೊಲೆಯಿಟ್ಟೆಡೆಯೊಳವೊಕ್ಕು ತೋರಮುತ್ತಿನಾರಮ ನಲ್ಲಾಡಿಯುಂ, ಕಬವೆಯ ಮಡಿಗಳ ಬಟಿವಿಡಿದು ಬೆಳೆದ ಚೆಂಗಣಿ ಗಿಲೆಯ ಕಂಪಿನೊಳ್ ಪೊರೆದು ಪರಿವ ತೊಱೆಗಾಲ್ಗಳ ಸೀರ್ಪನಿಗಳ ನೀಂಟಿಯುಂ ಇಂತು ಪಾಱುಬೊಜಂಗನ ಗೆಯ್ತಮನೊಳಕೊಂಡು ತೀಡೆ ||೫೪||

ಕಡುಸೊರ್ಕಿಂದಲರಂಬನಾನೆಯೆನಿಸೀತೆಂಗಾಳಿ ತನ್ನಿಚ್ಚೆಯಿಂ |
ನಡೆತಂದಪ್ಪುದು ಬೇಗದಿಂ ಬಿರಯಿ ನೀಂ ಪೋ ಪೋಗು ಪೋಗೆಂದು
ಮುಂ || [1]ಗಡೆಯೊಳ್ ಸಾಱುವ ಡೌಡೆಯೆಂಬ ತೆಱದಿಂದಂ ಬಗ್ಗಿಸುತ್ತಿ
ರ್ದುವು | ಗ್ಗಡದಿಂ ಕೋಗಿಲೆ ಮೊಗ್ಗೆಯಿಂ ಮಿಡಿಗಳಿಂ ಸೊಂಪೇಱುವ
ಮ್ಮಾವಿನೊಳ್ ||೫೫||

ಆಲ*ರ್ಗಳನಾಂತ ಪಾದರಿಗಳೊಳ್ ತರದಿಂದೆಱಗಿರ್ದ ತುಂಬಿಗಳ್ |
ಪಲವು ಬಸಂತನೊಲ್ದೊಲಿಸಿ ಕಾಡುವ ರೂಡಿಯ ಬರ್ದುವೆಂಡಿರಂ ||
[2]ನಿಲೆ ಸೆಱೆಗೆಯ್ವೆನೆಂದು ಪಲವಾಗಿರೆ ಮಾಡಿದ ತನ್ನ ಬಳ್ಳಿಸಂ |
ಕಲೆಗಳಿವೆಂಬಿನಂ ಬಗೆಯನಿರ್ಕುಳಿಗೊಂಡುವದೊಂದು ತಾಣದೊಳ್ ||

ಇವಱ ತನಿಗಂಪನಾಂ ಸವಿ |
ವೆವೆನುತ್ತೆಸೆವಲ*ರ್ಗೆ ಕಾಪನಿತ್ತುಱೆ ಕೈಕೊಂ ||
ಡವೊಲೆಱಗಿ ಪಱಮೆವಱುವಿಂ |
ಡವಿದತ್ತದಿ*ಮುರ್ತ್ತೆಯಲ್ಲಿ ಸಂದಣಿಗೊಳುತುಂ ||೫೭||

ಬಗೆಯದೆ ನಡೆವಳಿಗರಸಂ |
ಪಗೆಯರ ಮನೆಗೆಯ್ದಿ ಬಟಿಕ ಜಾಱುವವೊಲ್ ಸಂ ||

1. ಗುಡಿ. ಗ|| 2. ಗಳಿ. ಗ||

ಪಗೆಯ ನನೆಗೆಯ್ದು ಬೞಿಕೊ |
ಯ್ಯಗೆ ಜಾಱುವ ತುಂಬಿ ನಗಿಸಿದುದು ಮಲ್ಲಿಗೆಯಂ ||೫೮||

ಕಡುನಿಮಿ*ರ್ದ ಕೊಂಬುಕೊಂಬಿನೊ |
ಳೆಡೆವಿಡದಲ*ರ್ದಲರ ತೊಂಗಲಿಂ ಪುದಿದುಮಣಂ ||
ಗಡಣದಿನೆಯ್ತಂದೆಱಪಾ |
ಱಡಿಗಾರಡಿದಾಣವಾಯ್ತು ಸಂಪಗೆ ಪಲವುಂ ||೫೯||

ಕಾಲ್ಸಮನಿಸೆ ಪೊಸಬಂಡಿನ |
ಮೆಲ್ಸರಿಯಂ ಸುರಿಯುತಿರ್ಪ ಸಂಪಗೆವೂಗಳ್ ||
ಬಲ್ಸೆಱೆವಿಡಿವಂತಿರ್ದುವು |
ಮೆಲ್ಸರದಿಂ ಪಾಡುತಿರ್ಪ ಪೆಣ್ದುಂಬಿಗಳಂ ||೬೦||

ಕನ*ರ್ಗೊನರಂ ಕ*ರ್ದುಂಕಿ ದನಿದೋಱುವ ಕೋಗಿಲೆ ಮೇಳದಾಳ್ಗಳೆಂ|
ದೆನೆ ಗಿಳಿವಿಂಡು ಬಂದೆಱೆಯೆ ಬರ್ಪವರೆಂದೆನೆ ಪೊಣ್ಮುತಿರ್ಪ ಪೂ ||
ವಿನ ಪೊಸಗಂಪು ಕತ್ತುರಿಯ ಕಂಪೆನೆ ಪಾಡುವ ತುಂಬಿ ಗಾಣರೆಂ |
ದೆನೆ ನನೆಯಂಬನೋಲಗದ ಸಾಲೆವೊಲಿರ್ದುವು ಬಂದಮಾವುಗಳ್||೬೧||

ನನೆಯಂ [1]ಪೇಱಿದ ತೋರಗೊಂಬು ನನೆಯಂ ಪೂಗೊಂಚಲಂ [ಪೊತ್ತನೆ |
ಟ್ಟನೆ [2]ಬಿಣ್ಪೇಱಿದ ಬಳ್ಳಿಗೊಂಬು ನನೆಯಂ ಪೂಗೊಂಚಲಂ ಕಾಯನಂ||
ತೆನಸುಂ ತಾಳ್ದಿದ ಗುಜ್ಜುಗೊಂಬು ನನೆಯಂ ಪೂಗೊಂಚಲಂ [ಕಾಯ್ಗಳಂ |
ತನಿವಣ್ಣಂ ತಳೆದಳ್ಳಿಗೊಂಬು ತರದಿಂ ಚೆಲ್ವಾದುದಿಮ್ಮಾವಿನೊಳ್ ||೬೨||

ಮಲ್ಲಿಗೆಯಲ್ಲಿ ತುಂಬಿ ಮೊರೆಯುತ್ತಿದೆ ಕಂಪಿನೊಳೊಂದಿ ತೆಂಕಣಿಂ |
ಮೆಲ್ಲನೆ ಗಾಳಿ ತೀಡುತಿದೆ ಕೋಗಿಲೆಗಳ್ ಪೊಸಮಾಮರಂಗಳೊಳ್ ||

---

1. ಪೊತ್ತಿಹ. ಗ||     2. ಬಿಳ್ಪೇ. ಗ||

ಬಲ್ಲುಲಿಯಿಂದೆ ಬಗ್ಗಿಸುತುಮಿಂತಿದೆ ಬಂದುದು ಸುಗ್ಗಿ ತಳ್ವಿದಂ |
ನಲ್ಲನೆಸುತ್ತ್ರದೊರ್ವಳಿಳವೆಣ್ ಸುರಿದಳ್ ಮಿಗೆ ಕಣ್ಣ ನೀರ್ಗಳಂ ||೬೩||

ವ|| ಮತ್ತೊರ್ವ ಚೆನ್ನೆ ಪೊನ್ನ ಕರುಮಾಡಮಂ ಬಳಸಿ ಬೆಳೆದ ಪೂದೋಂಟಮಂ ಪೊಕ್ಕು ಮೆಯ್ಗರೆದ ನಲ್ಲನಂ ನೆವದಿನಿಂತೆಂದಳ ದೆಂತೆನೆ :— ||೬೪||

ಎಲೆ ತಣ್ಗಾಳಿಯೆ ನೀನೇಂ |
ಕಲೆದಪೆ ಮಱಿದುಂಬಿಯೇಕೆ ಪಲ್ಮೊರೆದಪೆ ಕೋಂ ||
ಗಿಲೆಯೇಕೆ ಕಿನಿಸಿದಪೆ ಕಾ |
ದಲನಿಲ್ಲದ ಪೆಣಗೆ ನೋಯಿಪರೆ ನೀವೆನ್ನಂ ||೬೫||

ವ|| ಎಂಬ ಮಾತಂ ಕೇಳ್ದು ತಲ್ಲಣದಿನವಳ ನಲ್ಲನಲ್ಲಿಗೆ ಪೋಗಿ ಮೇಳದ ಕೆಳದಿ ಮೆಲ್ಲನಿಂತೆಂದಳ್ ||೬೬||

ಕೂಡೆ ಮುಗುಳ್ತ ಮಲ್ಲಿಗೆಗೆ ತೀಡುವ ಗಾಳಿಗೆ ತಂಡತಂಡದಿಂ |
ಪಾಡುವ ತುಂಬಿಗಳ್ಗೆ ಸುಟಿವಂಚಿಗೆ ಕೋಡುವ ಪೂಗೊಳಕ್ಕೆ ಮಾ ||
ತಾಡುವ ಪಕ್ಕಿಗಳ್ಗೆ ದನಿದೋಱುವ ಕೊಂಚೆಗೆ ಸಣ್ಣಗಾಯ್ಗಳಿಂ |
ಮೂಡುವ ಮಾಮರಕ್ಕಗಿವಳಾಕೆಯೊಳೀಮುನಿಸೇಕೆ ಸಾಲದೇ ? ||೬೭||

ವ|| ಮತ್ತಮೊಂದೆಡೆಯೊಳ್ ||೬೮||

ತರದಿಂದುಣ್ಮುವ ಕಣ್ಣನೀರ್ವನಿಗಳಂ ಕೈಕೊಂಡು ನುಣ್ಮುತ್ತಿನೊ |
ರ್ಚರಮಂ ಪೆರ್ಮೊಲೆ ಚುನ್ನವಾಡೆ ಸೆಳೆಮಾವಂ ನೆಮ್ಮಿ ಪೂಗಂಪಿ [ನೊಳ್ ||
ಪೊರೆದಲ್ಲಾಡುವ ತುಂಬಿವಾಡಸೊಲವಿಂ ಕೇಳ್ವಂದದಿಂ ನಿಂದು ಪಾ |
ದರಿಗಂ ನಿಲ್ಲದೆ ಪೋದುದರ್ಕೆ ಬಗೆಗೆಟ್ಟೆರ್ದಾಕೆ ಕಣ್ಗೊಪ್ಪಿದಳ್ ||೬೯||

ವ|| ಅದಲ್ಲದೆಯುಂ ಮತ್ತಮೊರ್ವ ಗಾಡಿಕಾರ್ತಿ ಸಂದಣಿಸಿ ಚೆಂದಂಬಡೆದ ಕೆಂದಳಿರ ಪಂದರಮಂ ಮೆಯ್ವೆಂಕೆಗಂಜಿ ಪತ್ತೆಸಾರ್ದಿಂ ತೆಂದಳ್ ||೭೦||

ಎಲೆ ತೀಡುವ ತೆಂಗಾಳಿಯೆ |
ನಲವಿಂ ಕಾಲ್ವಿಡಿದು ತಿಳಿಪಿ ತಳ್ವಿಲ್ಲದೆ ಕಾ ||
ದಲನಂ ತಂದೊಡೆ ನಱುಸು |
ಯ್ಯಲರಿಂದಂ ನಿನ್ನನಾಗಳುಂ ನೆಱೆ ಪೊರೆವೆಂ ||೭೧||

ವ|| ಅಂತು ಬಂದ ಬಸಂತದೊಳೊರ್ಮೆ ನನೆಯಂಬಂ ತನ್ನ ಮೇಳದ ಕೆಳೆಯನಪ್ಪ ನಗೆಗಾಱನಂ ಬಱಿಯಟ್ಟೆ ಬರಿಸಿ ಪಸಾಯ್ತರೆಲ್ಲರುಂ ಬಗೆಯಱಿದಿಟ್ಟೆಡೆಯುಂ ತೊಲಗಿ ಪೋಗೆ, ಕೆಲಕ್ಕೆ ಕರೆದು ಕನಸಂ ಕೇಳ್ಪುದೆಂದಿಂತೆಂದಂ ||೭೨||

ತಳತಳಿಸಿ ಬೆಳಪ ತಿಂಗಳ |
ಬೆಳಗಂ ಕವ*ರ್ವಂತೆ ಮೆಱೆವ ಮೆಯ್ವೆಳಗಿಂ ಕ ||
ಣ್ಗೊಳಿಪೊರ್ವಳನಾನಿಂದಿನ |
ಬೆಳಗಪ್ಪೊಂದೆರಡು ಗಱಿಗೆಯಾಗಲ್ ಕಂಡೆಂ ||೭೩||

ಮಿನುಗುವ ನಿಟ್ಟೆಸಳೊಳ್ ನೀ |
ರ್ವನಿಗಳನೊಳಕೊಂಡು ತೋರ್ಪ ಕೆಂದಾವರೆಯಂ ||
ನೆನೆಯಿಸಿದುದು ಕಾಲುಗು*ರ್ಗಳಿ |
ನೆನಸುಂ ಕಣ್ಗೊಳಿಪ ನಿಡಿಯಮೆಲ್ಲಡಿಯವಳಾ ||೭೪||

ನೇರಿತೆಳವಾಱೆಗಂಬಮು |
ನೋರಂತಿರೆ ನುಣ್ಪುವೆತ್ತು ಸೋಲಿಪ ಚೆಲ್ವಿಂ ||
ಬಾರಿಸಿ ಸೊಬಗಿಂಗೆತ್ತಿದ |
ತೋರಣಗಂಬಂಬೊಲಿರ್ಪುವಾಕೆಯ ತೊಡೆಗಳ್ ||೭೫||

ಮಿಱುಪ ಸುಱಿವಡೆದ ಸಿಂಗರ |
ದೊಱೆಯೊಳ್ ತಲೆದೋರ್ಪ ತೆರೆಗಳೆಂದೆಂಬಿನಮೇಂ ||
ಮೆಱೆದುವೊ ಪೊರ್ಕುೞ ಗಾಡಿಯೊ |
ಳಱುಪುವ ತೆಳ್ವಸಿರೊಳೆಸೆವ ತಿವಳಿಗಳವಳಾ ||೭೬||

ಮಿಳಿ*ರ್ದಾಡುವ ಮಱಿದುಂಬಿಯ |
ನೊಳಕೊಂಡೆಸೆದಿರ್ಪ ತಾವರೆಯವೊಲ್ ಪೊಳೆಪಂ ||
ತಳೆದು ಕುರುಳೋಳಿಯಿಂ ಬಗೆ |
ಗೊಳಿಸಿದುದೋರಂತೆ ಮಿಸುಪ ನಗೆಮೊಗಮವಳಾ ||೭೭||

ವ|| ಮತ್ತಮವಳ ಮೆಲ್ಲಡಿವೊದಲ್ಗೊಂಡು ಮೆಲ್ಲಮೆಲ್ಲನೆ ಮೇಗಡರ್ದ ನೀಳ್ದ ಕಣ್ಗಳುಂ ಸೆಳೆನಡುವಿನಲ್ಲಾಟಮಂ ಕಂಡು ಪೊಱಿವಾಱಿಂದೇಱಲಾರ್ತುವಿಲ್ಲ; ಅವಳ ಕಡುಗುಣ್ಪನಾಳ್ದ ಪೊರ್ಕುೞೊಳಗಟ್ಟಿ [1]ಬಗೆ ಎನ್ನಂ ತೆಗೆಯಿಮೆಂದೆತ್ತಿದ ಕೈಯಂತಿರ್ದ ಬಾಸೆಯೊಳಂಟುಗೊಂಡ ಕಣ್ ತಿವಳಿಯೊಳಂ ಸಿಲ್ಕಿ ಪೋಗಲಾರ್ತುವಿಲ್ಲ; ಅವಳ ಬೆಟ್ಟಿತಪ್ಪ ಬಟ್ಟಮೊಲೆಯಿಟ್ಟೆಡೆಯೊಳ್ ತೊಟ್ಟನೆ ಸಿಲ್ಕಿದ ಕಣ್ ಕಪ್ಪಿನೊಳ್ ಕೆಡೆದ ಮಱಿವುಲ್ಲೆಯಂತೆ ಮಿಡುಕಲಾರ್ತುವಿಲ್ಲ; ಅವಳ ನಗೆಮೊಗದೊಳೊಯ್ಯನೊಯ್ಯನೆಱಗಿದ ಕಣ್ ಎಸೆವ ಪೊಸದಾವರೆಗೆಱಕದಿಂದೆಱಗಿದ ಮಱಿದುಂಬಿಯಂತೆ ಪೆಱಪಿಂಗಲಾರ್ತುವಿಲ್ಲ; ಅವಳ ಪೆಱನೊಸಲನಲೆವ ಬಳ್ಳಿಗುರುಳೊಳ್ ತೊಡಂಕಿದ ಕಣ್ ಕಣ್ಣಿವಲೆಯೊಳ್ ಕೆಡೆದೆರಲೆಯಂತಡಿಯಿಡಲಾರ್ತುವಿಲ್ಲ; ಅಂತುಮಲ್ಲದೆಯುಂ ||೭೮||

ತೊಳಗುವ ಮುತ್ತಿನೋಲೆಗಳ ಬೆಳ್ವೆಳಗಿಂ ಸುಲಿಪಲ್ಲ ಮಿಂಚಿನಿಂ |
ಪೊಳೆವಲ*ರ್ಗಣ್ಣ ನುಣ್ಗದಿ*ರ್ಗಳಿಂ ತಿಸರಂಗಳ ನೀಳ್ದ ಡಾಳದಿಂ ||
ಬಳೆದೆಸೆದಿರ್ಪ ಸೆಳ್ಳುಗುರ ಮೆಯ್ವೊಳೆಪಿಂ ಮಿಗೆ ಪೆರ್ಮೆವೆತ್ತು ಕ |
ಣ್ಗೊಳಿಸಿದಳಾಕೆ ಪಾಲ್ಗಡಲ ಪೆರ್ದೆರೆಯೊಳ್ ಸಿರಿ ನಿಂದಳೆಂಬಿನಂ||೭೯||

ತೊಳಗುವ ಮುತ್ತಿನೋಲೆಗಳ ಬೆಳ್ವೆಳಗಿಂ ಮಿಗೆ ಪೆರ್ಮೆವೆತ್ತು ಕ |
ಣ್ಗೊಳಿಸಿದಳಾಕೆ ಪಾಲ್ಗಡಲ ಪೆರ್ದೆರೆಯಂತಿರೆ ಜೊನ್ನದೊಂದು ಪು ||

---

೧. ಬಗೆಯನೆನ್ನಂತೆ ಗೆಯ್ಯಿಮೆಂದೆತ್ತಿದ ಕೈಯುಂ ಗ||

ತ್ರುಟಿಯವೊಲೊಪ್ಪವೆತ್ತ ಬಿದುಗಲ್ಲಿನ ಬೊಂಬೆಯ ಪಾಂಗಿನಂತೆ ಸೊಂ |
ಪಳವಡೆ ಬಂದುದಂ[1]ಕನಸಿನೊಳ್ ನೆಱೆನೋಡಿದೆನೆಂದು ಪೂಸರಂ ||೮೦||

ವ|| ಇಂತು [2]ಕೇಳೆ ಪೇೞ್ವುದುಂ ಮೆಲ್ಲನೆ ನಗೆಗಾಱನಿಂತೆಂದಂ||೮೧||

ಕನಸಿದು ನನ್ನಿ ಕೇಳ್ ನಿನಗೆ ಬೇಗದೆ ಸಾರ್ವಳದೊರ್ವ ಚೆನ್ನೆಯಿಂ|
ದೆನೆ ನನೆಯಂಬನುಟ್ಟ ತಳಿ*ರ್ವಟ್ಟೆಯನಾಗಳೆ ಮೆಚ್ಚುಗೊಟ್ಟು ಮೆ ||
ಲ್ಲನೆ ನಡೆತಂದು ಪೊನ್ನ ಕರುಮಾಡದ ಮೇಲ್ನೆಲೆಯಲ್ಲಿ ಗಾಡಿಯಿಂ |
ಬೆನೆ ನೆರೆದೋಲಗಂ ನಲವು ಕೈಮಿಗೆ ತನ್ನನೆ ನೋಡುತಿರ್ಪಿನಂ ||೮೨||

ವ|| ಅಂತೋಲಗಂಗೊಟ್ಟು ಕುಳ್ಳಿರ್ದು ಬಿತ್ತಿಯೊಳಂದಂಬ[3]ಡೆವಂತು ಬಚ್ಚಿಸಿದ ಬಣ್ಣಂಗಳಂ ಬೇಱೆವೇಱೆ ನೋಡಿ ಮೆಚ್ಚುತಿರ್ಪಾಗಳ್ ನಗೆಗಾಱಂ ಬಿನ್ನಪಮೆಂದಿಂತೆಂದಂ :— ||೮೩||

ಬರೆದ ಬನಮಿರ್ಕೆ ನೋಡೀ |
ಕರುಮಾಡದ ಕೆಲದೆ ಬೆಳೆದ ಪೂದೋಂಟಮನಿಂ ||
ಚರದಿಂ ಬಗೆಗೊಳಿಪಂಚೆಯ |
ನೆರವಿಗಳಂ ನೋಡು ತಳೆದು ಬೇಟಂಗಳುಮಂ ||೮೪||

ಮಾವಿನ ಜೊಂಪಮಂ ಮಿಸುಪ ಸಂಪಗೆಯಂ ಬಗೆಗೊಳ್ವ ಜಾದಿಯಂ |
ಪೂವಿನ ಗೊಂಚಲಿಂ ಪುದಿದ ಪಾದರಿಯಂ ಪರಿತರ್ಪ ತುಂಬಿಯಂ ||
ತಾವರೆಗಿರ್ಕೆಯಾದ ಕೊಳನಂ ನೆರೆದಾಡುವ ಜಕ್ಕವಕ್ಕಿಯಂ |
ತೀವಿದ ಬಂಡು [4]ಬಂದು [5]ನೆರೆಯುತ್ತಿರೆ ಮೆಲ್ಲನೆ ಬರ್ಪಕಾಲ್ಗಳಂ ||೮೫||

ವ|| ಎಂದು ಬಿನ್ನವಿಸುತ್ತಿರೆ

ಬನದೆಡೆಯಂ ನೋಡುವುದೆಂ |
ದೆನಸುಂ ತುಂಬಿಗಳ ದನಿಗಳಿಂ ಕರೆವವೊಲೊ ||

1. ತಾಂ ಕನಸಿನೊಳ್ನೆರೆನೋಡುತಮೆಂದು. ಗ|| 2. ಪೇಳೆ ಕೇಳ್ವುದುಂ. ಕ||ಖ||
3. ಬಡೆದು ಪಜ್ಜಳಿಸಿದ. ನ|| 4. ಬಂಡು. ಗ|| ಬಿಂದು. ಕ|| 5 ನೆಗ. ಕ||

ಯ್ಯನೆ ಬಂದು ಬಂದು ನಾಡೆಯುಂ |
ಯನ ಕೆಲದೊಳ್ ತೀಡಿದತ್ತು ತೆಂಬೆಲರಾಗಳ್ ||೮೬||

ವ|| ಅಂತು ಬಂದ ತೆಂಗಾಳಿಗೆ ಪಿಡಿದ ಕೆಂದಾವರೆಯ ಮುಡಿದ ಮಲ್ಲಿಗೆಯ ಪೂಸಿದ ಸಿರಿಕಂಡದ ಕಪ್ಪುರದ ತಂಬುಲದ ನೊಸಲ ಕತ್ತುರಿಯ ಕಂಪಂ ಮೆಚ್ಚುಗುಡುವಂತೆ ಮೆಲ್ಲನೆ ಮೆಯ್ವಾರ್ಚಿ ಬಟಿಯಂ ಬನಮಂ ನೋಡಲ್ವೇೞ್ಕುಮೆಂದು ನನೆಯಂಬಂ ಬಗೆಯೊಳ್ ನೆನೆಯುತ್ತಿರ್ಪನ್ನೆಗಂ ||೮೭||

ತೊಂಗಲ್ಗೊಂಡಿರ್ದ ಕೆಂಪಾದಸುಗೆಯ ತಳಿರಂ ಕಂಪುದೀವಿರ್ದಪೂವಂ |
ಮಾಂಗಾಯಂ ಪೊಚ್ಚಪೊಂಬಾಡೆಯ ಮರುಗವುನಿಂಬಾದ ನಲ್ವಾಡ [ವಣ್ಣಂ ||
ಪೊಂಗಿರ್ದಾನ್ಪೈದಿಲೊಳ್ದಾವರೆಯ ಮುಗು*ಳ್ಗಳಂ ಸೊಂಪಿನಿಂ ಬೆಳ್ಪುವೆತ್ತಿ|
ರ್ದಿಂಗೋಲಂ ಪಣ್ತು ದಾಳಿಂಬಗಳನೊಲವಿನಿಂ ತೋಂಟಿಗಂ ಕೊಟ್ಟು [ನೊರ್ವಂ ||೮೮||

ವ|| ಅಂತು ಕಾಣ್ಕೆಗೊಟ್ಟವದರಿಪುದೆಂದಿಂತೆಂದಂ :—ಪೆಱನಾಡೆಯಂ ನಿನ್ನ ಕೈಯೊಳ್ ಬನ್ನಂಬಡೆದು ಕಿನ್ನನಾಗೆಯವನ ಮೆಯ್ಗಂದಿದ ಚಿನ್ನಪಾಂಗಿನಂತೆ ಪೊಡಪುಡುಗಿದ ಜಾದಿಯಂ ನಗುವಂದದಿ ನರಲ್ದ ಸುರಹೊನ್ನೆಗಳೊಳಂ, ಚಲದಿಂ ಮಲೆವ ಮಱುವರಸರ ಪೊಸ ನೆತ್ತರೊಳ್ ಪೊರೆದ ನಿನ್ನ ಬಾಳಂತೆ ಒಳ್ಪುವಡೆದ ಕೆಂದಳಿರ್ಗಳಿಂ ಮಿಸುಗುವ ಅಸುಗೆಗಳೊಳಂ, ನಿನ್ನ ಮುಳಿಸಿನ ಬೆಂಕೆಯಿಂ ಪೊತ್ತಿ ಪೊಗೆದುರಿವ ಪಗೆವರ ಬೀಡಿನಂತೆ ಸುತ್ತಲುಂ ಪೂತ ಮುಳ್ಮುತ್ತುಗದ ಮರಂಗಳೊಳಂ, ನಿನ್ನಡಿಯಂ ನೆರವಿಲ್ಲದೆ ನಂಬಿದೆವೆಂಬರಸರ ಚಿನ್ನ ಪೊನ್ನ ನೆಲೆವಾಡದಂತೆ ಪೂಸರಂಬಡೆದ ಕೊಸಗಿನ ಮರಂಗಳೊಳಂ, ನಿನ್ನ ಗಾಡಿಯಂ ನೋಡಿ ಕೂಡಲ್ಪಡೆಯದ ಮಡದಿಯರ ಕದಂಪಿನಂತೆ

ತುಱುಗಿದಲರಿಂ ಬೆಳ್ಪೇಱಿದ ಬಕುಳಂಗಳೊಳಂ, ಬಿನದಕ್ಕೆ ಪಕ್ಕಾದ
ಬನಮಂ ನೋಡಲ್ವೇಟ್ಪುದೇಂ ದಂದೆಂಬುದುಮಾತಂಗೆ ಮೆಚ್ಚುಗೊಟ್ಟು ||

ಜಡಿವ ಪಡಿಯಱರ ಸೊಗಯಿಪ |
ನುಡಿಕಾಱರ ಮೇಳದರಸುಗಳ ಮೆಲ್ಲನೆ ಕೈ ||
ಗುಡುವ ಸೊಬಗೆಯರ ನೆರವಿಗ |
ಳೊಡನೆಟ್ದಂ ಬನಮನೊಸೆದು ನೋಟ್ಪುಜ್ಜುಗದಿಂ ||೯೦||

ಬೀಸುವ ಚೆನ್ನಸೀಗುರಿಗಳಿರ್ಕೆಲದೊಳ್ [1]ಮಿಳಿ*ರ್ದಾಡೆ ನಾಡೆಯುಂ |
ಗೋಸಣೆವೆತ್ತ ರಾಯರಿದಿರೇ[2]ಟ್ತರೆ ತುಂಬಿಗಳಚ್ಚವೂಗಳಿಂ ||
ದೂಸರವಾದ ಚೊಲ್ಲೆಯದ ಕಂಪಿನೊಳೊಕುಟಿಯಾಡೆ ಸಿಂಗರಂ |
ದೇಸೆಯೊಳೊಂದಿ ತೋಱೆ ತಳ*ರ್ದಂ ನನೆಯಂಬನದೊಂದು ಚೆಲ್ವಿನಿಂ ||

ನಡೆಗಳೊಳಂಚೆ ನುಣ್ಗುರುಳೊಳಾಱಡಿ ತೋಳ್ಗಳೊಳಳ್ಳಿಗೊಂಬು ಸೋ |
ರ್ಮುಡಿಗಳೊಳ್ಕೈದೆ ಸೋಗೆ ಮಿಗೆ ಪೆರ್ಮೊಲೆಯೊಳ್ ಪೊಣ*ರ್ವಕ್ಕಿ
[ನಿಚ್ಚಮುಂ ||
ಕಡುಮುಳಿಯುತ್ತುಮಿರ್ಪುವಿದಱೊಳ್ ದೊರೆಕೊಂಡುವೆನುತ್ತೆ ಕಾಯ್ದು
ದಾ | ಟಿಡುವವೊಲಾಬನಕ್ಕೆ ನಡೆತಂದುದು ಪೆಂಡಿರ ತಂಡಮೇಟ್ಗೆಯಿಂ ||

ಕಡೆಗಣ್ಗಳ್ ಕುಡಿಮಿಂಚನೀಯೆ ಸುಲಿಪಲ್ ಬೆಳ್ದಿಂಗಳಂ ಬೀಱೆ ಕೇ |
ಸಡಿ ಕೆಂದಾವರೆವೂಗಳಂ ಕೆದಱೆ ಪುರ್ಬಿಂಗೋಲವಿಲ್ಗಂದವಮಂ ||
ಕುಡೆ ತೋಳ್ ನೀಳ್ದೆಳಗೊಂಬಿನೊಳ್ ತೊಡರೆ ಗಲ್ಲಂ ನುಣ್ಪು
[ಕೈಮಿಕ್ಕು ಕ |
ನ್ನಡಿಯಂ ಪೋಲ್ತಿರೆ ಬಂದರಲ್ಲಿ ಪಲಬರ್ ಚೆಲ್ವಪ್ಪಿನಂ ಚೆನ್ನೆಯರ್ ||

ತಿಸರಂ ತೊಳಗುವ ಮುತ್ತಿನ |
ಪಸರಂ ಮೊಲೆ ಬೆಟ್ಟು ತಿವಳಿ ತೆರೆಯೆಂದೆನೆ ಸಂ ||

1. ಮಿಮಿರ್ದಾ ಕ||   2. ರೆಯ್ತರೆ ಕ||

ತಸದ ಕಡಲಂತೆ ಮೆಲ್ಲನೆ |
ಪೊಸವೆಂಡಿರ್ ಗಡಣಮೆಸೆವಿನಂ ನಡೆತಂದರ್ ||೧೪||

[1]ಎಡೆಗಿಱುವ ಮೊಲೆಯ ಪೊಱೆಯಿಂ |
ಬಡನಡು ನಡೆ ನೋಡುವವರ ಬಗೆ ನಡುಗುವವೊಲ್ ||
ನಡುಗೆ ನಲವಿಂದಮೊಡನೊಡ |
ನಡಿಯಿಟ್ಟರ್ ನೆರೆದು ಬಿಂಕಗಾರ್ತಿಯರರೆಬರ್ ||೧೫||

[2]ಇಸಲೊಡರಿಸುವಿಂಗೋಲನ |
ಮಿಸುಗುವ ಪೊಸವಿಲ್ಲ ಜೇವೊಡೆಯ ದನಿಯವೊಲಿ ||
ಣ್ದೆಸೆಯೊಳ್ ನೇವುರದುಲಿ ಪಸ |
ರಿಸೆ ಮೆಲ್ಲನೆ ಚೆಲ್ವಗಾರ್ತಿಯರ್ ನಡೆತಂದರ್ ||೧೬||

ವ|| ಅಂತು ಪರಿಪರಿಯ ಸಿಂಗರದಿನಂದಂಬಡೆದು ನಡೆವ ಮಡದಿಯರ ಮುಡಿಯೊಳ್ ತೊಡರ್ದ ಪೊಸವೂಗಳ ಕಂಪಿಂಗೆಳಸಿ ಮೇಲೆ ಬಳಸಿದ ಮಱಿದುಂಬಿಯ ಬಂಬಲ್ ಎತ್ತಿಪಿಡಿದ ಪೀಲಿದಪೆಯಾಗೆ ಬಂದು ಬನದ ಬಾಗಿಲಂ ಪುಗುವಲ್ಲಿ ||೧೭||

ತಳಿರಂ ಮೆಲ್ಲನೆ [3]ನೂಂಕಿ ಮಾಮಿಡಿಗಳಂ ಸೆಂಡಾಡುತುಂ ಕೂಡೆ ಪೂ |
ಗಳ ದೂಳಿಂ ಪೊಱೆಯೇಱುತುಂ ಸೊನೆಗಳೊಳ್ ನೀರಾಟಮಂ ಮಾ
[ಡುತುಂ ||
[4]ಬಟಿಯಂ ಕೈಮಿಗೆ ಬರ್ಪ ತುಂಬಿ[5]ಯುಲಿಯಿಂದಂ ಡಂಗುರಂಬೊಯ್ಸು
[ತುಂ |
ತಳ*ರ್ದೇಱಂ ಬಂದುದೊ ಕಾವನಾನನೆ[6]ಯ ವೊಲಾತಣ್ಗಾಳಿ ತನ್ನಿ
[ಚ್ಚೆಯಿಂ ||೧೮||

---

1. ಇಡಿಕಿರಿದ. ಕ|| 2. ಒಸೆದೊಡನಿಸು. ಕ||
3. ಸೋಂಕಿ 4, ಚೆಳೆಯಂ, 5. ಗಳಪಿಂಡಿಂ, 6. ಯೆನಲಾ--ಇವು ಕಾವ್ಯಸಾರದಪಾಠ.

ಆಗಾಳಿಯ [1]ಮೆಲ್ಸೋಂಕಿಂ |
ದಾಗಳೆ ಬೆಮರೊಡನೆ ಬಳೆದ ಸೇದೆಯುದೆತ್ತಂ ||
ಪೋಗೆ ನಲವಿಂದೆ ಪೊಕ್ಕಂ |
ಬೇಗದೆ ಪಡಿಯಱರ [2]ಜಡಿಪಮೆಡೆಗೊಳೆ ಬನಮಂ ||೯೯||

ವ|| ಅಂತು ಪೊಕ್ಕು [3]ಪಚ್ಚೆಯ ಪಡ್ಡಳಿಯ ಪಾದರಿಯ ಪಲಸಿನ ತೆಂಗಿನ ಕೌಂಗಿನ ದಾಳಿಂಬದ ದವನದ ಮರುಗದ ಮಲ್ಲಿಗೆಯ ಮಾವಿನ ಮಾದಲದ ಸುರಗಿಯ ಸುರಹೊನ್ನೆಯ ಇರವಂತಿಯ ಸೇವಂತಿಯ ಕಂಪುಮಿಗುವ ಸಂಪಗೆಯ ಪಸಿಯ ಸಾಲ್ಗಳ ನಡುವೆ ನನೆಯಂಬಂ ನಡೆವಾಗಳ್ ಬಲಗೆಲದೊಳ್ ಕೈಗೊಟ್ಟು ಬರ್ಪ ನಗೆಗಾಱನಿಂತೆಂದಂ ||

ಎಸೆವಲ*ರ್ಗೊಂಚಲಂ ತಳೆದ ಮಲ್ಲಿಗೆ ಪೂವಿನ ಸಂತೆ ಕೊಂಬಿನಿಂ |
ಮಿಸುಗುವ ಮಾಮರಂ ಪೆಸರ ಮಾಳಿಗೆ ಮಾಡಿದ ತೊರವೆಟ್ಟುಗಳ್ ||
ಪೊಸಮನೆ ಸುತ್ತಲುಂ ಬಳಸಿ ಪರ್ವಿದ ಕೇದಗೆ ಪಚ್ಚವಾಗಿಲೆಂ |
ಬೆಸಕಮನಾಳ್ದು ಪೂಗಣೆಯನಿರ್ಪ ಪೊಱಲ್ಗೆಣೆಯಾದುದೀಬನಂ ||೧೦೧||

ನಿನ್ನ ಬರವಱಿದು ನಲವಿಂ |
ಮುನ್ನಮೆ ಗುಡಿಗಟ್ಟಿದಂತೆ ಪೊಸವೂಗುಡಿಯಿಂ ||
ದನ್ನೆರೆದು ನಿಮಿ*ರ್ದ ಕುಡಿಯಿಂ |
ಚಿನ್ನಂ ತಳೆದೆತ್ತಿದಂತೆ ಮಲ್ಲಿಗೆಯೆಸೆಗುಂ ||೧೦೨||

ಅಡ*ರ್ದೆಲೆವಳ್ಳಿಗಳೆಲೆಯಂ |
ಪಿಡಿದಿರ್ಪೆಳಗೌಂಗಿನಲ್ಲಿ ತರತರದಿಂ ನೇ ||
ರ್ಪಡೆ ಸಮದೆಲೆವಸರದವೊಲ್ |
ಕಡುಚೆಲ್ವಂ ಪಡೆದು ತೋರ್ಪುವೀಬನದೆಡೆ [4]ಯೊಳ್ ||೧೦೩||

---

1. ಮೇಲೆಸೋಂಕಿದೊ| ಡಾ. ಕ|| 2, ಜಡಿಪದೆಡೆ ಕ|| 3 ಪೊಚ್ಚೆಯ ಕ||
4. ಗಳ್. ಕ||

ಪುದಿದ ತನಿವಣ್ಣ ಬಿರಿಕಿಂ |
ದುದಿ*ರ್ದತ್ತಂ ರಾಸಿಯಾದ ಬಿಟ್ಟುಗಳಿಂ ಪೆಂ ||
ಪೊದವಿದ ಪಲವುಂ ದಾಳಿಂ |
ಬದ ಮರಗಳ್ ರನ್ನವಸರದಂತೆಸೆದಿರ್ಕುಂ ||೧೦೪||
ಮಿಸುಪಲ*ರ್ಗಳ ಬೆಳ್ಪಿಳಗಿಂ |
ಮುಸುಕಿದ ತಾವರೆಗಳೆಲೆಯನಾಂತ ಕೊಳಂಗಳ್ ||
ಪಸರಿಸಿದ ಕಂಚುಗಾಱರ |
ಪಸರದವೋಲ್ ನಾಡೆ ತೋರ್ಪುವೀಕೆಲಬಲದೊಳ್ ||೧೦೫||
ಬಗೆಗೊಳೆ ಮೆಲ್ಲನೆ ನಡೆವಂ |
ಚೆಗಳಂ ತಳೆದಿರ್ಪ ಬಳ್ಳಿವಮಾವಿನ ಸಾಲ್ಗಳ್ ||
ನೆಗ*ಟ್ದ ಬೆಲೆವೆಣ್ಗಳಂದದೆ |
ಮಿಗೆ ಸೋಲಿಪ ಸೂಳೆಗೇಱಿಯಂತಿವೆ ಬನದೊಳ್ ||೧೦೬||
ಇಟ್ಟಣಿಸಿದಲ*ರ್ಗಳೆಸೆದಿರೆ |
ಕಟ್ಟುದ್ದಮನಾಂತು ಮಿಸುಪ ಕೊಸಗಿನ ಚೆಲ್ವೇಂ ||
ಪುಟ್ಟಿಸಿದುದೊ ಪೊಸಸಿರಿಗೆಱ |
ವೆಟ್ಟನೆ ಪೂಗಣೆಯನಿರ್ಪ ನೆಲೆವಾಡದವೋಲ್ ||೧೦೭||
ನನೆಗಳ ಪೂಗಳ ಪೊಱೆಯಿಂ |
ದೆನಸುಂ ತಲೆವಾಗುತಿರ್ಪ ಸೆಳೆಗೊಂಬಿಂ ನೆ ||
ಟ್ಟನೆ ಪರಿವಡೆದೀಸಂಪಗೆ |
ನಿನ[1]ಗೆಱಗದರೆಱಗಿಪಂತೆ ತೋರ್ಪುವು ಬನದೊಳ್ ||೧೦೮||
ನೆಗಟ್ದಿರವಂತಿಯ ಮನೆಗಳೊ |
ಳಗಲಮನೊಳಕೊಂಡು ಪಲವು ಪಟುಕಿನ ಸಱಗಳ್ ||
ಬಗೆಗೊಳೆ ನಿನಗಿಕ್ಕಿದ ಗ |
ದ್ದುಗೆಗಳವೋಲ್ ಕೂಡೆ ತೋರ್ಪುವೀಕಟ್ಟೆದಿರೊಳ್ ||೧೦೯||

1. ಗಸರಸೆರಗಿಸುವಂತೆ, ಕ||

ವ|| ಎಂದು ಮುನ್ನವಿಾಬನಂ ಪಟ್ಟಣದಂತಿರ್ಪುದೆಂದು ನುಡಿದ ನುಡಿಯಂ ಪರಿವಿಡಿಯಿಂ ನನ್ನಿವಾಡಿದೆಯೆಂದು ತೊಣೆಯುತ್ತೆ ಕಿಱು ದೆಡೆಯಂ ಪೋಗೆವೋಗೆ ||೧೧೦||

ಕನ*ರ್ಗೊನರಿರ್ಕೆ ನುಣ್ದಳಿರ ಬಾಬ್ವನೆ ಕೆಂದಳಿರಿರ್ಪ ಬೀಡು ಬ |
ಲ್ಲನೆಯ ಪೊದರ್ಮುಗುಳ್ನನೆಯ ಪೆರ್ಮನೆ ಮೊಗ್ಗೆಯ ತಾಣಮಚ್ಚವೂ |
ವಿನ ನೆಲೆ ಸಣ್ಣಗಾಯ ಬಲುಗಾಯ ಪೊಟಲ್ ನಸುದೋರೆವಣ್ಣ ತಾ |
ಯ್ವನೆ ಪೊಸವಣ್ಣ ಗೊತ್ತಿದೆನೆ ಕಣ್ಗೆಸೆದಿರ್ದುದದೊಂದು ಮಾಮರಂ ||

ಮೊರೆಯುದ ತುಂಬಿಯುಂ ಕುರುಳ ಸಂದಣಿ ಸೋಲಿಸೆ ಜಕ್ಕವಕ್ಕಿಯುಂ |
ಪರಿವಡೆದಿರ್ದ ತೋರಮೊಲೆ ಬಗ್ಗಿಸೆ ನೈದಿಲನೆಯ್ದೆ ಕಣ್ಮಲರ್ ||
ಕೊರಗಿಸೆ ನಾಡೆ ಕೆಂದಳಿರನೋವದೆ ಕೆಂದಳಮಿಕ್ಕಿ ಮೆಟ್ಟಿ ಮಾ |
ಮರದಡಿಯಲ್ಲಿ ನಿಂದ ಬನವೆಣ್ಣೆನಿಪಂದದಿನೊರ್ವಳೊಪ್ಪಿದಳ್ ||೧೧೨||

ವ|| ಅವಳಂ ತೊಟ್ಟನೆ ಕಟ್ಟಿದಿರೊಳ್ಕಂಡು ನನೆಯಂಬಂ ತನ್ನ ಬಗೆಯೊಳಿಂತೆಂದಂ :— ||೧೧೩||

ಕರಮೆಸೆವ ರೂಪು ಕಣ್ಗ |
ಚ್ಚರಿಯುಂ ಪುಟ್ಟಿಸಿದುದೀಕೆಯಾವಳೊ ನೆಲೆದೊಳ್ ||
ಪಿರಿದುಂ ಮಾನಸಿಯರ್ಗೀ |
ಪರಿಚೆಲ್ವಿನಿತುಂಟೆ ಸಗ್ಗದಾಕೆಯೆ ದಿಟದಿಂ ||೧೧೪||

ವ|| ಎಂದು ಪತ್ತೆಸಾರ್ದು—ನೀವಾರ್? ಎಂದು ಮೆಲ್ಲನೆ ಬೆಸ ಗೊಳ್ವುದುಂ; ಆ ಅಚ್ಚರಸಿ—ಬಿನದದಿಂ ಬನದ ಸೊಂಪಂ ನೋಡಲೆಂ ದೈತಂದೆಂ, ಎನೆ; ನಾಡೆಱೆಯನಿಂತೆಂದಂ :— ||೧೧೫||

ಮಿಗೆ ಮುನ್ನಂ ಕಂಡವೋಲಿರ್ದಪುದು ಮಿಸುಗುವೀಬಾಜಯಿಾ ಕಾಲ್ಗಳೀಸಂ | ಪಗೆಯಿಾನೇಱುಲ್ಗಳೀಪಾದರಿ ಬಿಡೆ ಮೊರೆವೀತುಂಬಿ ಯಿಾಕೊಂಚೆಯಿಾಮ || ಲ್ಲಿಗೆಯಿಾತಣ್ಗಾಳಿಯಿಾಕೋಗಿಲೆಯ ಬಳಗವಿಾ

ಸೋಗೆಯಿಸೊಂಪಿನಿವ್ಮಾ | ವುಗಳೀಚೆನ್ನೈದಿಲೀಕೆಂಪಳಿರ ತುಱುಗ
ಲೀಯಂಚೆಯಿಾಕರ್ವುದೋಂಟಂ ||೧೧೬||

ಅಱಿತಂ ನಿಮಗುಂಟೆಂತಾ |
ತೆಱನಂ ನೀಮೆನಗೆ ಪೇೞ್ವುದುಳ್ಳುದನೆನೆ ಬಾ ||
ಯ್ದೆಱೆ ಸುಲಿಪಲ್ಗಳ ಮಿಂಚಂ |
ಕಱೆಯುತ್ತಿರೆ ತಿಳಿಯೆ ಪೇೞಲೆಂದಿಂತೆಂದಳ್ ||೧೧೭||

ವ|| ಆದೇನೆಂದೊಡೆ—ಪೊಂಗೇದಗೆಯ ಬಾಡ್ವೇಲಿಯೊಳಂ, ಪನ್ನೀರ್ಗಾಲ್ವೆಯೊಳಂ, ಕುಂಕುಮದ ಮಡುಗಳೊಳಂ, ಬಕುಳದ ಬಾಗಿಲ್ವಾಡದೊಳಂ, ಮರುಗದಟ್ಟೆಳೆಯೊಳಂ, ಪೊಂಬಾಳೆಯ ಪೞವಿಗೆಗಳೊಳಂ, ಪಾದರಿಯ ನೆಲೆವಾಡಂಗಳೊಳಂ, ದವನದ ದಾವಣಂಗಳೊಳಂ, ಮಲ್ಲಿಗೆಯ ಮನೆಗಳೊಳಂ, ಕಪ್ಪುರದ ಸೊದೆಯೊಳಂ, ಸೊಂಪುವಡೆದ ಕಂಪಿನ ಪೊೞಲೆಂಬ ಬೀಡು ಬಗೆಗೊಳಿಸುತಿರ್ಪುದು. ||೧೧೮||

ಚದುರುಂ ಮಿಕ್ಕಿರ್ದ ತಕ್ಕುಂ ನೆಲಸಿದ ಸೊಬಗುಂ ಮ್ಯೆಮೆಯುಂ
[1]ಚಾಗಮುಂ ಪೆ | ರ್ಚಿದ ಸೊಂಪುಂ ಪೆರ್ಮೆಯುಂ ನನ್ನಿಗೆ ನೆಲೆಯೆನಿಸಿ
ದಾರ್ಯಮುಂ ಬೀರಮುಂ ಕುಂ || ದದ ಚೆಲ್ವುಂ ರೂಢಿಯುಂ ಕೈಮಿ
ಗೆ ನೆಲನನಿತಂ ಗೆಲ್ದು ತನ್ನಿಚ್ಚೆಯಿಂದಿ | ನ್ನಿದನಾಳ್ವಂ ಕರ್ವುವಿಲ್ಲಂ
ಪಡೆದೊಡವೆಗಳಂ ಸಾರ್ದವರ್ಗೀಯಬಲ್ಲಂ ||೧೧೯||

ಇನಿಯರನೆಂದುಂ ನೆರೆಯಿಪ |
ಬಿನದಮೆ ತನ್ನಿಚ್ಚೆಯಾಗೆ ರೂಢಿಸಿದಾಕಾ ||
ವನ ನಚ್ಚಿನ ಪೆಂಡಿತಿ ಚೆ |
ಲ್ವಿನ ಪುತ್ತೞಿಯಿಚ್ಚೆಗಾರ್ತಿಯೆಂಬಳ್ ಪೆಸರಿಂ ||೧೨೦||

ಸೊಗಯಿಪ ಜಕ್ಕವಕ್ಕಿಗಳನೇೞಿಪ ಪೆರ್ಮೊಲೆಯಿಂದೆ ಮಿಾನ್ಗಳಂ |
ನಗುವಲ*ರ್ಗಣ್ಗಳಿಂದೆ ಸುೞಿಯಂ ಪೞದೊಪ್ಪುವ ಪೊರ್ಕುೞಿಂದೆ ಮೆ ||

1. ಜಾಣ್ಮೆಯುಂ. ಕ||

ಲ್ಲಗೆ ನಡೆವಂಚೆಯಿಂ ಜಡಿವ ಮೆಲ್ನಡೆಯಿಂದೆ ಸಮಂತು ನೋಱ್ಪರಿ |
ಚ್ಚಿಗೆ ಪೊಸಪ್ರೊಗೊಳಂಬೊಲಮ*ರ್ದೊಪ್ಪುವಳೊಪ್ಪದಿನಿಚ್ಚೆಗಾರ್ತಿ
[ತಾಂ ||೧೨೧||

ಅವಳ ಮೊಗದಂತೆ ಮೆಯ್ಸಿರಿ |
ಸವನಿಸದೆನಗೆಂದು ಕಂದನೆ*ರ್ದೆಯೊಳ್ ತಾಳ್ದಂ ||
ಹಿವಗದಿರನೆಂದೊಡಿನ್ನುೞ |
ದವರೇನಂ ಪೊಗೞಲಾರ್ಪರಾಕೆಯ ಮೊಗಮಂ ||೧೨೨||

ವ|| ಮತ್ತಮವಳ ಕಾಲ ನೇವುರದಿಂಚರವೆಂಬ ಪೆಣ್ಣಂಚೆಯ ದನಿ ಕರ್ವುವಿಲ್ಲನೆಂಬಂಚೆಯಂ ಬಱಿವಱಿಯೊಳ್ ಬಱಿಸೆಯುಂ, ನುಣ್ದೊಡೆಯೆಂಬ ಪೊಂಬಾಱೆಯ ಬಾೞ್ಗಂಬವಮುಲರ್ಗಣೆಯನೆಂಬ ಸೊರ್ಕಾನೆಯುಂ ತೊಲಗಲೀಯದೆ ನಿಲಿಸೆಯುಂ, ಪರಿವಡೆದ ಪೊಱವಾಱೆಂಬ ಮಣಲ ದಿಣ್ಣೆ ನೀಱೆಯರ ಬಲ್ಲಹನೆಂಬ ನೀರ್ವಕ್ಕಿಯ ಕಾಲಾಟಕ್ಕೆಡೆಗುಡೆಯುಂ, ಗುಣ್ಪುವಡೆದ ಪೊರ್ಕುೞೆಂಬ ತಿಳಿಗೊಳಂ ಕಮ್ಮಂಗೋಲನೆಂಬ ಜಕ್ಕವಕ್ಕಿಯನೋಲಾಡಿಸೆಯುಂ, ತೊಳಪ ತೋರಮೊಲೆಗಳೆಂಬ ಪೂಗೊಂಚಲ್ ಪೂಸರಲನೆಂಬ ತುಂಬಿಗಿಂಬಾಗೆಯುಂ, ನುಣ್ಪುವಡೆದ ನಳಿತೋಳ್ಗಳೆಂಬ ಸೆಳೆಗೊಂಬುಗಳ್ ಕಾವನೆಂಬ ಗಂಡುಗೋಗಿಲೆಯಂ ತೇಂಕಿಸೆಯುಂ, ಮಿಸುಪ ಸುಲಿಪಲ್ಪೊಳೆಗೆಂಬ ಕಾರಮಿಂಚಿಂಗೋಲ್ವಿಲ್ಲನೆಂಬ ಸೋಗೆಯಂ ಸೋಲಿಸೆಯುಂ, ಮಿಳಿರ್ವ ಬಂಬಲ್ಗುರುಗಳೆಂಬ ತೊಡಂಕುವಲೆ ಬಸಂತನ ಕೆಳೆಯನೆಂಬೆರಲೆಯಂ ಸಿಲ್ಕಿಸೆಯುಂ-ಇಂತಳವಿಗೞಿದ ಸೊಬಗಿನ ಸೊಂಪು ಪೆರ್ಚಳವಾಗಿರ್ಪುದುಂ ||೧೨೩||

ಆವರಿರ್ವರ ವೈಮೆಯುಮಂ |
ತವರಿರ್ವರ ಝಡಿವಡೆದ ಪೊಸಗಾಡಿಯುಮಂ ||
ತವರಿರ್ವರ ಬೇಟಮುಮಂ |
ತವರಿರ್ವರೊಳಲ್ಲದಿಲ್ಲ ಪೆಱತೊರ್ವರೊಳಂ ||೧೨೪||

ವ|| ಮತ್ತಮವರೊರ್ಮೆ ಪಲತೆಱದ ಮರಂಗಳಿಂಡೆಡೆಗಿಱಿದಡವಿಗಳೊಳ್ ಕಾಡೊಡೆಯರಂತೆ ಬಿರಯಿಗಳೆಂಬ ಮಿಗಂಗಳ ಬೇಂಟೆಯನಾಡಿಯುಂ, ಮತ್ತಮವರೊರ್ಮೆ ಪೊಳೆವ ಕಟ್ಟಣಕದ ಕಟ್ಟಗೆಗಳಿಂದಿಟ್ಟಣವಾದ ತಿಳಿಗೊಳಂಗಳೊಳಾನೆಯಂತೆ ನೀರಾಟಮನಾಡಿಯುಂ, ಮತ್ತಮೋರೊರ್ಮೆ ಪಲತೆಱದ ನಳನಳಿಸಿ ಬೆಳೆದೆಳವಾಡೆಯ ಸುಟಿಯೆಲೆಯನುಡಿಯೊಳಮರ್ಚಿಯುಂ, ಮತ್ತಮೋರೊರ್ಮೆ ಕಟ್ತಲೆಗೆ ನೆಲೆವನೆಯೆನಿಪೆಳವಳ್ಳಿಯ ಬಳಸಿಂಗೊಳಗಾದಸುಗೆಯ ಜೊಂಪಂಗಳೊಳ್ ಕೋಗಿಲೆಯಂತೆ ಕೂಟಮನೊಡರ್ಚಿಯುಂ—ಇಂತು ಪಲವುಂ ಪಗಲಂ ಕಳೆಯುತ್ತುಮಿರ್ದೊರ್ಮೆ ||೧೨೪||

ಬೆಳೆದೆಳವಳ್ಳಿಯೊಳ್ ಪುದಿದು ತೋಱುವ ಮಾವಿನ ತೋರಗಂಬದಿಂ |
ತಳ*ರ್ಗಳಿನಿಂಬುವೆತ್ತ ಪೊಸಲೋವೆಗಳಿಂ ನಸುಬಾಗಿ ಕೊಂಬಿನೊಳ್ ||
ಪೊಳೆವೆಳಗಾಯ ನುಣ್ಬೊಗರಿಯಿಂ ಸುಟಿತರ್ಪಲರಿಂದೆ ಬಿಟ್ಟ ಪೂ |
ಗಳ ಪುಡಿಯಿಂ ಕರಂ ಸೊಗಯಿಪೋಲಗಸಾಲೆಯೊಳಿರ್ದರೊಪ್ಪದಿಂ ||

ನಡೆ ಕೆಲಕಂಚೆ ಬಿನ್ನವಿಸು ಬೇಗದೆ ಕೋಗಿಲೆ ಪಾಡಿನೋಜೆಯಂ |
ಗಡಣಿಸು ತುಂಬಿ ಸೋಗೆ ದನಿಯೆತ್ತದಿರೊಯ್ಯನೆ ಬಂದು ಕುಳ್ಳಿರೀ ||
ಯೆಡೆಗೆ ಬಸಂತಯೆಂದು ಗಿಳಿಗಳ್ ಕಡುಪಿಂ ನಡೆತಂದು ಸುತ್ತಲುಂ |
ಪಡಿಯಱರಾಗಿ ಚಪ್ಪರಿಪುವೋಲಗದೊಳ್ ಸಲೆ ಕರ್ವುವಿಲ್ಲನಾ ||೧೨೭||

ತೊಲಗದೆ ಪಕ್ಕದೊಳ್ ನಲಿವ ಕನ್ನಡವಕ್ಕಿಗಳೋಳಿ ಬಿಂಕದಿಂ |
ಬಲಗೆಲದೊಳ್ ನೆಗಟ್ತವಡೆದಿರ್ಪರಸಂಚೆಯ ಪಿಂಡು ಬೇಟವ ||
ಗ್ಗಲಿಸಿದ ಜಕ್ಕವಕ್ಕಿಗಳ ವಂಗಡಮಿಂಬಱಿದಿರ್ಪ ಗಂಡುಗೋ |
ಗಿಲೆಗಳ ತಂಡಮೊಪ್ಪೆ ಬಗೆಗೋಲಗವೊಪ್ಪಿದುದಂದು ಕಾವನಾ ||೧೨೮||

ಮಡದಿಯರ ಸುಯ್ಯ ಕಂಪುಂ |
ಕಡುಮೆಱೆವಿನಮಿಟ್ಟ ಕತ್ತುರಿಯ ಪೊಸಗಂಪುಂ ||

ಮುಡಿಯಲ*ರ್ಗಳ ನಱುಗಂಪುಂ |
ಗಡಣಿಸಿ ಕಡೆಗೋಡಿವರಿದುವೊಡ್ಡೋಲಗದೊಳ್ ||೧೨೯||

ಕೆಂದಳದೊಂದು ಕೆಂಪು ಕಿಸುಸಂಜೆಯನಂಜಿಸೆ ಕರ್ಪುವೆತ್ತ ಕೇ |
ಸಂ ದಳವಾದ ಕಟ್ಟಲೆಯನೇಟಿಸೆ ನುಣ್ಮೊಗವಚ್ಚದಿಂಗಳಂ ||
ಸಂದಿಸೆ ನೀಳ್ದ ಕಣ್ಬೆಳಗು ನಾಲ್ದೆಸೆಗಂ ಪೊಸತಪ್ಪ ಜೊನ್ನಮಂ |
ಮುಂದಿಡೆ ಬಂದಳಾಗಳಿರುಳಂದದಿನೊರ್ವಳದೊಂದು ಗಾಡಿಯಿಂ||೧೩೦||

ವ|| ಅಂತು ನೊಸಲೆಂಬ ಪೆಱಗೆ ಕೈದಾವರೆಗಳ್ ಮುಗಿಯೆ ಬಱದೊಂದು ತೆಂಬೆಲರ್ ಬರೆ;—ಅರಸಾ ಜೊನ್ನಮನುಣ್ಬ ಪಕ್ಕಿ ಬಾಗಿಲೊಳ್ ಬಂದಿರ್ದಪುದೆಂದು ಬಗೆಯಱುದು ಬಿನ್ನಪಂಗೆಯ್ದು ಒಡಗೊಂಡು ಬರ್ಪಾಗಳ್ ||೧೩೧||

ಮಿಱುಪ ಕುರುಳೋಳಿ ಮೂಡುವ |
ಕಿಱುಮೊಲೆ ತಳತಳಿಸಿ ಪೊಳೆವ ಕೇಸಡಿ ನೀಡುಂ ||
ತಱುಗಿದೆವೆ ಚೊಲ್ಲೆಯಂ ಮಿಗೆ |
ಮೆಱೆವಿನಮೆಳವೆಂಡಿರಿರ್ದರೆರಡುಂ ಕೆಲದೊಳ್ ||೧೩೨||

ನೇವುರದಿಂಚರಂ ನೆಗಪ ಕಣ್ಬೆಳಗೋಲಗಸಾಲೆಯೆಲ್ಲಮಂ |
ತೀವೆ ಬೆಡಂಗುವೆತ್ತ ನೊಸಲೊಳ್ ಕುರುಳೋಳಿಗಳುಯ್ಯಲಾಡೆ ಕೆಂ ||
ದಾವರೆವೂಗಳಂ ತರದೆ ಕೇಸಡಿ ಸಾಲಿಡೆ ಬಿಂಕದಿಂ ನೆಗ |
ಡ್ದಾವಗಮೋಲಗಿಪ್ಪ ಸಱುಮಿಂಡಿಯರೊಪ್ಪಿದರೆತ್ತ ನೋಡ್ಪೊಡಂ ||

ಸಸಿಯಂ ಮೆಯ್ವೆಳಗಿಂದೆ ಪೊನ್ನೊಡೆಯನಂ ಪೆಂಪಿಂದೆ ಮಾದೇವನಂ |
ಪೆಸರ್ವೆ*ತ್ತಿಂಚರದಿಂದೆ ಸಂದ ಬಿದಿಯಂ ಜಾಣಿಂದೆ ಮೆಯ್ಗಣ್ಣನಂ ||
ಪೊಸತಪ್ಪಗ್ಗದ ಗಾಡಿಯಿಂದೆ ಪಿರಿದುಂ ಬೆಳ್ಮಾಡಿ ಬೇಟ್ಪಂತುಟು |
ಬ್ಬಸಮಂ ಮಾಡುವ ಬರ್ದೆಯರ್ ಪಲಬರುಂ ಕಣ್ಗೆಂ ಬೆಡಂ
[ಗಾದರೋ ||೧೩೪||

ವ|| ಅಂತು ಮೆಱೆವೋಲಗದ ನಡುವೆ. ||೧೩೫||

ಕಿವಿಗಿಂಪಂ ಕಱೆವಂತೆ ನುಣ್ಚರದೆ ಪಾಡುತ್ತಿರ್ಪ ಪೆಣ್ದುಂಬಿಗೊ |
ಪ್ಪುವ ಬಂಡಂ ಬಿಡದೀಯುತುಂ ಗಿಳಿಗಳೋದಂ ಕೇಳ್ದು ಮೆಲ್ಪೊಂದಿ
[ತೋ ||
ಱುವ ಪಣ್ಣಂ ತಿಱಿದಿಚ್ಚೆಯಿಂದೆ ಕುಡುತುಂ ಚೆಲ್ವಿಂದೆ ಸಾರ್ತಂದು ಬೀ |
ಡುವ ಮುದ್ದಂಚೆಗೆ ಕೈಯ ತಾವರೆಯ ಕಾವಂ ಚೆಲ್ಲದಿಂ
[ನೀಡುತುಂ ||೧೩೬||

ತೊಡೆಯೊಳ್ [1]ಕಾದಲೆಯಿರೆ ಬಲ |
ಗಡೆಯಲ್ಲಿ ಬಸಂತನೊಲವಿನಿಂ ಕುಳ್ಳಿರೆ ತ ||
ನ್ನೆಡದೆಸೆಯೊಳ್ ಸೊಬಗಿಯರಿರೆ |
ಕಡುಚೆಲ್ವಂ ಪಡೆದನಾವಗಂ ನನೆಗಣೆಯಂ ||೧೩೭||

ಪರಿಪರಿಯ ರನ್ನದೊಡವಿನ |
ಬೆರಕೆಯ ಬೆಳಗಡರೆ ಮೆಯ್ಯನಗ್ಗದ ಪೆಂಡಿರ್ ||
ನೆರೆದಲರ ಚವರಮಂ ಬಿ |
ತ್ತರದಿಂ ಬೀಸುತ್ತುಮಿರ್ದರೆರಡುಂ ಕೆಲದೊಳ್ ||೧೩೮||

ಸುಗಿವವೆ ಮಲೆವವರಂ ಕೋ |
ಡಗಗಟ್ಟಂ ಕಟ್ಟಿ ತರ್ಪೆವೆಂ ಬೆಸಸೆಂದೊ ||
ಯ್ಯಗೆ ಕಿವಿಮೆಚ್ಚುವ ತೆಱದಿಂ |
ಸೊಗಯಿಸಿದುವು [2]ಕಣೆಯ ಗಱಿಪವಲ*ರ್ವಿಲ್ಲವನಾ ||೧೩೯||

ಮುತ್ತಿನ ಸರಕ್ಕೆ ನುಣ್ಪಂ |
ಬಿತ್ತರಿಸಿದ ಬೆಳ್ಪುಮಲ್ಲದಿಂತೀಪೊಸಗಂ ||
ಪೆತ್ತಣದೆನೆ ನಗುವಂತೆ*ರ್ದ |
ವತ್ತಿದ ಮಲ್ಲಿಗೆಯ ತಿಸರವೇಂ [3]ಸೊಗಯಿಸಿತೊ ! ||೧೪೦||

1. ಕಾದಲರಿರೆ. ಖ|| 2. ನನೆಯಕಣೆಗೆಳಲರ್ವಿಲ್ಲವನಾ. ಗ|| 3. ಸಮನಿಸಿತೋ. ಖ||

[1]ತನಗೆಱಕದೆಱಗದವರಂ |
ಮುನಿಸಿಂದಿಡಲೆಂದು ಸಮೆದ ಪಾಱುಂಬಳೆಯೆಂ ||
ದೆನೆ ದಾಳಿಂಬದ ಕೆಂಬಿ |
ಟ್ತಿನ ರನ್ನದ ತೋಳ ಬಂದಿಯೇಂ ತೊಳಗಿದುದೋ! ||೧೪೧||
ಬಿರಯಿಗಳನೆಲ್ಲರಂ ಮುಳಿ |
ದುರವಣೆಯಿಂ ಮೆಟ್ಟುವೆಡೆಯೊಳುಚ್ಚಳಿಸುವ ನೆ ||
ತ್ತರೊಳೊಂದಿದಂತೆ ಬಂದುಗೆ |
ಯರಲ ತೊಡರ್ ತೊಡ*ರ್ದು ಕಾಲೊಳೇನೊಪ್ಪಿದುದೊ ! ||

ವ|| ಅಂತು ನೋಟ್ಪರ ಕಣ್ಗೆ ನೆಲೆವೀಡಾದ ನನೆವಿಲ್ಲ ಬಲ್ಲಹನ ಮೇಲಾದ ಸೊಂಪಿಂಗೆ ಬೆಕ್ಕಸಂಬಡುತ್ತುಂ ಬಂದಿಂಗದಿರ್ಗಳಂ ಕಾಣ್ಕೆ ಗೊಟ್ಟು ಜೊನ್ನವಕ್ಕಿ ಬಿನ್ನವಿಸಿತ್ತದೆಂತೆನೆ :— ||೧೪೩||

ನಿನಗೆಂದುಂ ತಲೆವಾಗದ |
ನಿನಗಳ್ಕದ ನಿನ್ನವೇಳೆಗಾಯದ ಪಿರಿದುಂ ||
ನಿನಗೆ ಬೆಸಕೆಯ್ದು ಬಾಟದ |
ನಿನಗೋಡದ ಪಗೆವರೆಂಬರಿಲ್ಲಿಂದುವರಂ ||೧೪೪||

ವ|| ಈಗಳ್ ಸಿವನೆಂಬ ದುಟ್ಟಗೊರವಂ ಮಂಜುವೆಟ್ಟಮಂ ಗೊಟ್ಟಂಮಾಡಿ ಕಿತ್ತಡಿಗಳಂ ಮರುಳ್ವಡೆಗಳಂ ಕೂಡಿಕೊಂಡು ನಿಮ್ಮಡಿಗಳುಮಂ ಮಱೆದು ಲೆಕ್ಕಿಸದೆ ಮೇಲೆ ಬಿದ್ದು ಸಾವುಂ ನೋವಾಳವಾಗೆ ಮೆಯ್ಯಱಿಯದಿರ್ಪನಂತುಮಲ್ಲದೆಯುಂ ||೧೪೫||

ತಳಿರೆಂದೊಡಸುಗೆಯೆಂದೊಡೆ |
ಗಿಳಿಯೆಂದೊಡೆ ಕರೆವ ಕೋಗಿಲೆಗಳೆಂದೊಡೆ ಬಂ ||
ದೆಳವೂವೆಂದೊಡೆ ನೆಱೆದಿಂ |
ಗಳ ತಣ್ಬೆಳಗೆಂದೊಡುದ್ದಮುರಿವಂ ಗೊರವಂ ||೧೪೬||

1. ತನಗೆರಗದೊರಗುವವರಂ. ಕ||

ಪುದಿದುಱಿಗಣ್ಣನಾಣೆಯನದೇವ್ರೊಗ*ದ್ವಂ ಮುಗುಳೆಂದು ಮುಟ್ಟಬಾ |
ರದು ಬನಮೆಂದು ಬಾಯ್ದೆಱೆಯಬಾರದು ಸಂಪಗೆಯೆಂದು ಸೂಡಬಾ ||
ರದು ಕೊಳನೆಂದು ಕೈದುಡುಕಬಾರದು ತಾವರೆಯೆಂದು ತೋಱಬಾ |
ರದು ಪೊಸಸುಗ್ಗಿಯೆಂದುಸಿರಬಾರದು ತನ್ನಯ ಮಂಜುವೆಟ್ಟನೊಳ್ ||

ವ|| ಮತ್ತಮಾತಂ ಸರಿಯೊಳಾದೊಡಮಂಚೆಯೆಂಬುದಂ, ಕೆಱೆಯೊಳಾದೊಡಂ ಬಾಚೆಯೆಂಬುದಂ, ಸಿರಿಕಂಡದೊಳಾದೊಡಮಾಱಡಿಯೆಂಬುದಂ, ಕೊಡಗೂಸಿನುಡಿಗೆಯೊಳಾದೊಡಂ ಸೋಗೆಯೆಂಬುದಂ, ಬೆದಂಡೆಯೊಳಾದೊಡಂ ಪಾಡೆಂಬುದಂ, ಕೇಱಿಯೊಳಾದೊಡಂ ನೆರೆಯೆಂಬುದಂ, ಚಪ್ಪರಣೆಯೊಳಾದೊಡಂ ಪಣ್ಣೆಂಬುದಂ ಸೈರಿಸಂ; ಅಲ್ಲದೆಯುಂ ಈಪ್ರೋದಿರುಳ್ ಕಲಿಯ ಕಾಳೆಗಮಂ ಕಾದಿ ||೧೪೮||

ತಾರಗೆಗಳಟಿಯೆ ನೆಯ್ದಿಲ್ |
ನೀರಂ ಪುಗೆ ಕೂಡೆ ಮರ್ಬು ಮೆಯ್ವೆರ್ಚೆ ಕಡಲ್ ||
ನೀರೋಡುವಿನಂ ಪೆಱೆಯಂ |
ಬೀರದಿನಾಗೊರವನೆಯ್ದೆ ಬಾಟ್ದಲೆವಿಡಿದಂ ||೧೪೯||

ವ|| ಅದರ್ಕೆ ತಕ್ಕುದಂ ನಿಮ್ಮಡಿಗಳೆ ಬಲ್ಲಿರೆಂದು [1]ಬಗೆಯಱಲಾಱೆ ಜೊನ್ನವಕ್ಕಿ ಬಿನ್ನಪಂಗೆಯ್ಯಲೊಡನೆ ||೧೫೦||

ನೆಗೆದುರಿವ [2]ತಲೆಯ ಕಿಚ್ಚಿನೊ |
ಳೊಗುಮಿಗೆ ನಯ್ಯೊಯ್ದು ತೆಱದೆ ಪೊಣ್ಮಿದ ಮುನಿಸಿಂ ||
ಭುಗಿಲನುರಿದೆಬ್ದುನಾದಿ |
ಟ್ಟಿಗಳೊರ್ಮೆಯೆ ತೋಱಕಿಡಿಗಳಂ ಕೆದಱುವಿನಂ ||೧೫೧||

ಕಡಲೊಳ್ ನೇಸಱನುಬ್ದಲುಂ ಪೊಡವಿಯಂ ನುರ್ಗೊತ್ತಲುಂಕೊಂಕಿ ಘೀ|
ಳಿಡೆ ತಳ್ಕಿಂದೆಸೆಯಾನೆಯಂ ಮುಱಿಯಲುಂ ಪೊಂಬೆಟ್ಟಮಂ ನೂಂಕಲುಂ||

---

1. ಬಗೆಯಱಿಯಲ್ ದೋರೆ. ಕ|| 2. ದರಿಯ. ಕ||

ಪೆಡೆಯಂ ತೊಟ್ಟನೆ ಮೆಟ್ಟಿ ಬಾಸುಗಿಯನಾದಂ ಸೀಟಲುಂ ಪೊತ್ತು ಬಾ |
ನೆಡೆಯಂ ಬೇಗದಿನೆತ್ತಲುಂ ಬಗೆದ [1]ನಾಗಳ್ ದಪ್ಪದಿಂ ದಪ್ಪಗಂ||೧೫೨||

ವ|| ಅಂತು ದೆಸೆದೆಸೆಗೆ ಮಸಗಿ ||೧೫೩||

ಜವನಂ ಪತ್ತುವೆನೊಂಬತುಂ ಗರವುನೆಣ್ಬಂ ಗೊಂಟಿನೊಳ್
[ಕಟ್ಟಿ ತೂ |
ಗುವೆನೇಟುಂ ಕಡಲಂ ಕಡಂಗಿ ಕುಡಿವೆಂ ತಳ್ತಾಱಲಂ ಪೊಯ್ದು ತೂ |
ಱುವೆನೈದುಂ ಮೊಗಮುಳ್ಳನಂ ಕೆಡಪುವೆಂ ನಾಲ್ಕುಂ ದಟಂ ನೂಂಕೆ ನು |
ರ್ಗುವೆನಾಂ [2]ಮೂಱಡಿಯಿಟ್ಟನಚ್ಚಿಯೆರಡಂತೊಂದಾಗಿ ನೋೞ್ಪನ್ನೆಗಂ||

ಎನಗಂ ಮಾರಿಗಮಿದಿರಾಂ |
ಪನದಾವಂ ನಡೆದು ಪೋಗಿ ಬೇಗದೆ ಮುಕ್ಕ ||
ಣ್ಣನನಿಕ್ಕಿಮೆಟ್ಟಿ ಬಿಡೆ ತೊ |
ಟ್ಟನೆ ಜಡೆಯಂ ಕಿೞ್ತು [3]ಬಟಿಯ ಪೆಱೆಯಂ ತರ್ಪೆಂ ||೧೫೫||

ವ|| ಎಂದಿಂತು ನಡೆಯಲೊಡರಿಪುದಂ ಕಂಡು ಕೆಲದೊಳಿರ್ದ
ಬಸಂತನಿಂತೆಂದಂ:— ||೧೫೬||

ನೆಲವಱುಕೆಯ ಬಿದಿಯಂ ಪೊಡೆ |
ಯಲರನನಿಂದಿರನನದಟರಂ ತವಸಿಗಳಂ ||
ನೆಲೆ ನಟ್ಟು ನೋಯಿಸಿದುದಿ |
ನ್ನಲರಂಬಿನ ಮೊನೆಗೆ ನಿಲ್ವನೇ ಬಡಗೊರವಂ ? ||೧೫೭||

ಜವನಂ ಗೋಣ್ಮುಱಗೊಂಡು ಬಾಂಬೊಟಲನುಕಿರ್ಪಂ ಮೂಱುಮಂ
[ಸುಟ್ಟು ಜ |
ನ್ನವನುಬ್ಬಣ್ಣರನಾರ್ದು ಕೊಂದು ಮುಳಿಸಿಂ ಪೋರ್ದಾನೆಮೆಯ್ಯಾತನಾ ||

---

1. ದನಾದಂ ಖ|| 2. ಮಾರಡಿಯಿಟ್ಟುನಚ್ಚಿ ನೆರೆದಂ. ಗ|| 3. ಪೊಯ್ಯ ದೆನಾನಿರ್ಪೆ. ಗ||

ತೊವಲ್ಗಂ ಮೆಲ್ಪೊದೆಮಾಡಿ ಮೂಜಗಕೆ ಕೇಡಂ ಮಾಡುವಾ ನೆತ್ತಿಗ |
ಣ್ಣಾವನೊಳ್ ಕಾದುವ [1]ಬಲ್ಪುಮೊಗ್ಗೆಗರನಿಂದಾರಯ್ದು ಮೇಲೆತ್ತುವೆಂ ||
ಪಿರಿದಪ್ಪಾಳ್ತನದಿಂದೆ ಕೂರ್ಪವರ ಮಾತಂ ಮೀಱಿದಾಳ್ಗೆಯ್ತದೊಳ್ |
ನೆರೆದಿಂತೀಗಳೆ ಪೋಗಿ ತಳ್ತಿಱುವೆ[2]ನೆಂಬಾಮಾತದಂತಿರ್ಕೆ ಚೆ ||
ಚ್ಚರದಿಂ ನಮ್ಮರಸಾಳನಟ್ಟೆ ಮಗು*ೞ್ದಾತಂ ಬಂದು ಪೇೞ್ವಂತುಟಂ |
ತಿರದಿಂದಂ ತಿಳಿದೆತ್ತಿ ಕಾದುವುದು ಲೇಸಲ್ಲರ್ಗದೇವಮಂತಣಂ ||೧೫೯||

ವ|| ಎಂದು ಬಿನ್ನಪಂಗೆಯ್ದ ಬಸಂತನ ಮಂತಣದ ಮಾತಂ ಸೊರ್ಕಾನೆ ಮಂತಣೆಯ ಮಾವಂತನ ಮಾತಂ ಮನ್ನಿಸುವಂತೆ ಮನ್ನಿಸಿ ತೆಂಗಾಳಿಯೆಂಬ ದೂದನಂ ಕರೆದು,—ಗೊರವನಲ್ಲಿಗೆ ಪೋಗಿ ನಮ್ಮ ಪೆಱೆಯಂ ತಡೆಯದೆ ಬಿಡಿಸಿಕೊಂಡು ಬಾಯೆಂದೊಡಾತಂ ಬೇಗಂ ಮುಂಜುವೆಟ್ಟನೆಯ್ದಿ ತಪ್ಪಲ ಬನದ ಚೆಲ್ವಂ ನೋಡಿ ಮೆಚ್ಚುತ್ತುಂ ಬಂದು ತನ್ನ ಬರವಂ ಪಡಿಯಱರ್ಗಱಿಪಿ ತೆಱಪಱಿದೋಲಗದೆಡೆಯಂ ಪುಗಲೊಡನೆ || ||೧೬೦||

ಉರಿಗಣ್ಣೊಗೆದ ಬೀರಂ |
ಬೆರಸೊದವಿದ ನಂಜು ರೂಪುವೆತ್ತವೊಲೇನ ||
ಚ್ಚರಿಯಂ ಪುಟ್ಟಿಸಿದರೊ ಬಂ |
ದೆರಡುಂ ಕೆಲದಲ್ಲಿ ನಿಂದ ಬೀರಗಣೇಸರ್ ! ||೧೬೧||

ಬಗೆ ಪೊಱಸೂಸದೆ ಕೈಯಂ |
ಮುಗಿದೊಲವಿಂ ನೋಡಿ ಪೆರ್ಚುತುಂ ತಿರಿಸುಳಿಯಂ ||
ಪೊಗುಱುತ್ತಿರ್ತರದಿಂದೋ |
ಲಗದೊಳ್ ಕುಳ್ಳಿರ್ದ ಜತಿಗಳೇನೊಪ್ಪಿದರೋ ! ||೧೬೨||

ಬಳಸಿದ ತಾರಗೆಗಳ ಮಾ |
ರ್ಪೊಳೆಪೊಂದಿದ ಪೊನ್ನ ಬೆಟ್ಟು ಕೈಯಂ ಕಾಲಂ ||

---

1. ಮಗ್ಗೆ ತಿರದಿಂದಾ. ಖ|| 2. ನಾಮಾತಂತದಂತಿರ್ಕೆ. ಕ|| ಗ||

ತಳೆದಿರ್ದುದೆಂಬಿನಂ ಕ |
ಣ್ಗೊಳಿಸಿದನಂತವರ ಪಕ್ಕದೊಳ್ ಪಲಗಣ್ಣಂ ||೧೬೩||

ಸೊಗಯಿಪ ಪೊನ್ನನೇವುರದ ಮೆಲ್ಲುಲಿ ಮಾಣದೆ ಮೂಱುಕಣ್ಣನಂ |
ಪೊಗೞ್ವವೊಲುಣ್ಮೆ ಪೊಣ್ಮೆ ಪಿರಿದುಂ ಸುಟಿಮಾನುಡಿವೆಣ್ಣನಾಂತ ನಾ ||
ಲ್ಮೊಗಮಿರದಚ್ಚದಾವರೆಯ ಚೆಂದ್ದಮನಂದೊಳಕೆಯ್ಯೆ ಬಂದು ನೆ |
ಟ್ಟಗೆ ಬಲವಕ್ಕದೊಳ್ ನೆಲಸಿ ಕಣ್ಗೆಸೆದಂ ಬಿದಿ ನಿಂದು ನೋೞ್ಪರಾ ||

ದರೆಯಂ ಪೊತ್ತಾನೆಯ ಕೈ |
ಗೊರೆಯೆನೆ ಕಡುವೆಟ್ಟತಾದ ನಾಲ್ಕುಂ ತೋಳುಂ ||
ಕರಮೆಸೆದಿರೆ ಕುಳ್ಳಿರ್ದಂ |
ಸಿರಿಯರಸಂ ಕಾರ ಮುಗಿಲ ರೂವೆಂಬಿನೆಗಂ ||೧೬೫||

ಮಿಗೆ ಮಾತಾಡದಿರೇೞದಿರ್ ಮಿಡುಕದಿರ್ ಮೇಲ್ಬೀೞದಿರ್ ಸೊರ್ಕದಿರ್ | ನಗದಿರ್ ಬಾಯ್ಕುಡಿಗೊಳ್ಳದಿರ್ ಕಿಱುಚದಿರ್ ಮೆಯ್ನೊಂಕದಿರ್ ಕೈಗಳಂ || ಮುಗಿದಿರ್ ನೂಂಕದಿರೆತ್ತದಿರ್ ಗೞಪದಿರ್ ನೀನೆಂದು ಮುಕ್ಕಣ್ಣನೋ | ಲಗದೊಳ್ ತನ್ನೊಡನಾಡಿಗೂಡಿ ಜಡಿದಂ ಮಾಕಾಳನೋರೊರ್ವರಂ ||೧೬೬||

ವ|| ಅಂತು ಮ್ಮೆಮೆವೆತ್ತೋಲಗದ ನಡುವೆಯಾರಮನೋಸರಿಸದೆ ಬಿಗಿದ ಪಾಸಮಿದೆಂಬಂತೆ ನೀಳ್ದ ಕೆಂಜೆಡೆಗಳೊಳಂ, ಮಿಸುಪ ನೊಸಲ ಚೆಲ್ವು ಕಣ್ದೆಱೆದಂತೆ ತೋರ್ಪ ನೊಸಲ ಕಣ್ಣೊಳಂ, ಪತ್ತಿಸಾರ್ದ ಮರುಳ ಮೊತ್ತಮಂ ಬುಸ್ಸೆಂದು ಬೆದಱಿಸುವ ಪಾವಿನ ತೊಡವುಗಳೊಳಂ, ಜಸಮೆ ತನಗೆ ಮೆಯ್ಸಿರಿಯೆಂಬುದನಱಿಪುವಂತೆ ಪೂಸಿದ ಬೂದಿಯೊಳಂ, ನುಣ್ಪುವಟ್ಟು ತೋಱೆ ಬಿಗಿದುಟ್ಟ ಪುಲಿದೊವಲೊಳಂ, ತಕ್ಕಿನಿಂ ಮಿಕ್ಕುಪೋರ್ದಾನೆರಕ್ಕಸನ ಸಮ್ಮದ ಮೇಲ್ಪೊದಿಕೆಯೊಳಂ ಚೆಲ್ವನಾಂತು || ||೧೬೭||

ಹರಿಸದೆ ಸಗ್ಗದ ಜತಿಗಳ್ |
ನೆರೆದಂತೆರಡುಂ ಕೆಲಂಗಳೊಳ್ ತರದಿಂ ಕು ||
ಳ್ಳಿರೆ ಕುಳ್ಳಿರ್ದಂ ನಡೆನೋ |
ೞ್ಪರ ಕಣ್ಗಳ ಹಬ್ಬಮೆಂಬಿನಂ ಕಱುಗೊರಲಂ ||೧೬೯||

ವ|| [1]ಅಂತೆಸೆದಿರೆಯಾನಂಜುಗೊರಲನ ಗಾಡಿಯಂ ನೋಡಿ ಬಗೆಯೊಳಚ್ಚರಿವಡುತುಂ ಬಂದು ತುೞಿಲ್ಗೆಯ್ದು ಕೈಗಳಂ ಮುಗಿದು ನೆರೆದೋಲಗಮನಿತುಂ ತನ್ನಂ ನಡೆ ನೋಡೆ ಬಿನ್ನಪಮೆಂದಾದೂದನಿಂತೆಂದಂ :—[2]ಎಲ್ಲೆಡೆಗಳುಮಂ ತನ್ನಟ್ಟಿದೋಲೆಗಮಿಟ್ಟುಂಡಿಗೆಗಂ ಬಸಂ ಮಾಡಿದ ನನೆವಿಲ್ಲ ಬಲ್ಲಹಂ ನಿಮ್ಮಡಿಗಳ ಪೆಸರಂ ಪಲಂಬರಿಂ ಕೇಳ್ದು ಕೆಳೆತನಮಂ ಬಳೆಯಿಸುವಿಚ್ಚೆಯಿಂದೆನ್ನಂ ಕಳಿಪಿದನಾತನ ಬಲ್ಪಂ ಪೊಗೞ್ವೊಡೆನ್ನಪವಣಲ್ತು, ಆದೊಡಮಱುವನಿತಂ ಪೇೞ್ವೆನದೆಂತೆನೆ :—

ಅವನ ನುಡಿಗವನ ಮಂತಣ |
[3]ಕವನೆಸಕಕ್ಕವನ ತಕ್ಕಿನೇೞ್ಗೆ ಮೇಲಾ ||
ದವರ ನುಡಿಯುವರ ಮಂತಣ |
[4]ಮವರೆಸಕಮುಮವರ ತಕ್ಕು ಕೀೞಾಗಿರ್ಕುಂ ||೧೭೦||

ತೊಟ್ಟನಿದಂ ಸಿಟ್ಟಿಸಿದಂ |
ಬಿಟ್ಟನಿದೆಂಬೊಂದು ಬಿಲ್ಲ ಬಲ್ಮೆಯನಾರ್ಗಂ ||
ದಿಟ್ಟಿಸುವುದರಿದು ಪಗೆವರ್ |
ತೊಟ್ಟನೆ ಕೆಡೆದುದನೆ ಕಾಣಲುಂಟವನಿದಿರೊಳ್ ||೧೭೧||

ಕಡುಪಿಂದಾತನೊಳಾಂತರೋಡಿ ಬನಮಂ ಪೊಕ್ಕುಂ ಪೊದ[5]ಪಾರ್ದು ಕಾ | ಲ್ವಿಡಿದುಂ ಪಚ್ಚೆಲೆವಾರ್ದು ಮೆಯ್ಗರೆದು ಕೊಂಬಂ ಪೊರ್ದಿಯುಂ

1. ಅಂತಿದಿರ್ಗಾನಂಜು. ಖ|| 2. ಎಲ್ಲೆಡೆಗಣ್ಣುಂ ತಾನಟ್ಟಿದೋಲಗ. ಖ||
3. ಕವನೆಸಪಂತವನ. ಖ|| 4. ಮವರೆಸವಂತವರ. ಖ|| 5. ಪಾರ್ಡಿ. ಖ||

ನಲ್ಮೆಯಂ|| ನುಡಿದುಂ [1]ಮೆಯ್ಸಿರಿಗೆಟ್ಟುಮಿಂತು ನೆಲದೊಳ್ ನಾಣ್ಗಂದಿ
ನಿಂದಿರ್ಪರು | ಗ್ಗಡದಿಂ ಬಂದಿದಿರೊಡ್ಡಿ ಬಾೞ್ವವರನೆಂದುಂ ಕಂಡುದಿಲ್ಲಿ
ನ್ನೆಗಂ ||೧೭೨||

ಮಾವುಗಳವು ಮಲಿವರನೆ |
ಮ್ಮಾವುಗಳವೊಲುಱದೆ ಮುಱಿವುವೆಂದೊಡೆ ಕೇಳಾ ||
ಕಾವನ ಬರವಱಿದ ಬೞಿ |
ಕ್ಕಾವನ ಸೊಕ್ಕುಟಿಯದಿನಿಸುಮೇನಿರ್ಪುದೇ ? ||೧೭೩||

ಸಸಿ ಕೆಳೆಯಂ ಸರಲ್ ನಿಡಿಯಬಲ್ಲನೆ ಕರ್ಬಿನ ಕೋಲೆ ಬಿಲ್ ತಳಿ |
ರ್ತೆಸೆವೆಳಮಾವು ತುಂಬಿ ಪೊಸದಾವರೆ ಮಲ್ಲಿಗೆಯೆಂಬಿವಾಂತರಂ ||
ದೆಸೆವಲಿಗೆಯ್ವ ಪಾೞ ಮೊನೆಯೊಳ್ ನೆಗ*ೞ್ದಿರ್ದ ಬಸಂತನೆಂದೊಡೇಂ |
ಪೆಸ*ರ್ವಡೆದಾತನೊಳ್ ಪೊ*ಣರ್ದು ಪೋಪರೆಯೆಂಟಿ*ರ್ದೆಯುಳ್ಳರಾ
[ದೊಡಂ ||೧೭೪||

ಮಿಸುಪಲರಂಬುಗಳುರ್ಕಿಂ |
ಬೆಸಕೆಯ್ಯದೆ ಮಲೆವ ಬೀರರಂ ಪರಿದೆಂಟುಂ ||
ದೆಸೆಗಳೊಳಂ ಕಾಣೆವೆನಿ |
ಪ್ಪ ಸರದೆ ಬಲ್ಮೊರೆವುವೀಗಳಾಱಡಿನೆವದಿಂ ||೧೭೫||

ನಿನ್ನಯ ಚಾಗಮುಂ ಸಿರಿಯುಮಾಳ್ತನಮುಂ ದೊರೆವೆತ್ತ ಮೈಮೆಯುಂ |
ಮನ್ನಣೆಯುಂ ಪೊದಱ್ದ ಜಸಮುಂ ಬಗೆಯುಂ ಚಲಮುಂ ನೆಗೞ್ತೆಯುಂ ||
ನನ್ನಿಯುಮಾರ್ಗಮಚ್ಚರಿಯನಿತ್ತಪುವೆಮ್ಮೊಡೆಯಂಗಮಿಾತೆಱಂ |
ಪೊನ್ನದು ಕಮ್ಮಿತಾದ ತೆಱನಲ್ಲವೆ ನಲ್ವಗೆಗೊಂಡೊಡಿರ್ಪರುಂ ||೧೭೬||

ಪೊಡವಿಯೊಳಿಂತಾತನವೊಲ್ |
ಕಡುಬಲ್ಲಿದರಿಲ್ಲ ನಿಮ್ಮೊಳಾತಂ ಕೆಳೆಗೊಂ ||

---

1. ಮೆಲ್ಸಿಡಿ. ಕ||

ಡೊಡೆ ತೀರದುದಿನಿತಿಲ್ಲೀ |
ಗಡೆ ಬಿಡುವುದು ಪೆಱೆಯ ಸೆಱೆಯನಿದು ಲೇಸಲ್ತೇ ! ||೧೭೭||

ವ|| ಎನಲೊಡನೆ ಬಗೆಯೊಳ್ ಪುಟ್ಟಿದ ಮುಳಿಸಂ ಪೊಱಪೊಣ್ಮ
ಲೀಯದೆ ಮುಗುಳ್ನಗೆ ನೆಗೆವಿನಂ ಮಾದೇವನಿಂತೆಂದಂ:— ||೧೭೮||

ಒಱುವಾತನಿನಿಸು ಪೊೞ್ತುಂ |
ಮೆಱೆವಿನೆಗಂ ಗುಪಲೇಕೆ ನಿನ್ನಯ ಬಗೆಯೊಳ್ ||
ತಱುಸಂದಿರ್ದುದನೊರ್ಮೊದ |
ಲಱುಪದೆ ನಿನ್ನಂತು ನುಡಿವ[1]ನಾವನುಮೊಳನೇ ? ||೧೭೯||

ಉರ್ಕಾಳ್ಗಳಾದೊಡೇಂ ಕೇಳ್ |
ಸೊರ್ಕಾನೆಯ ಕೈಯ ಕರ್ವನಿನಿತುಂ ಸೆಳೆಯಲ್ ||
ಬರ್ಕುಮೆ ಪೆಱೆಯಂ ಬಿಡೆನಂ |
ತಿರ್ಕಿದು ಮತ್ತೊಂದು ಕಜ್ಜಮುಳ್ಳೊಡೆ ನುಡಿಯಾ ||೧೮೦||

ಅಱುಕೆಯ ರೂವಿಲ್ಲದ ನಿ |
ನ್ನೆಱೆಯಂಗುಬ್ಬಟೆಯ ಬೀರಮುಂಟೆಂದುದ್ದಂ ||
ಜಱುಚಿದೆ ಕೇರಿಲ್ಲದೆ ಕ |
ಣ್ದೆಱೆವಿನೆಗಂ ಬರೆವೆನೆಂಬ ಮರುಳಂ ಪೋಲ್ತೈ ||೧೮೧||

ಕೋಡುವ ಕೂಂಕುವ ಚೆಂದಂ |
ನೋಡಿರೆ ಕಾಳೆಗಕೆ ಬೆಂಬಲಂ ಗಡ ! ಪೆಂಡಿರ್ ||
ಸೂಡುವಲರಂಬು ಗಡ! ಪಿಡಿ |
ದಾಡುವ ಕರ್ಬು ಗಡ ! ಬಿಲ್ಲದೇನಚ್ಚರಿಯೋ ! ||೧೮೨||

ಪಡೆ ಮರವಟ್ಟ ಮಾವು ಗಡ ! ಬೆಳ್ಗೊಡೆಯಾಗಸಕೆಟ್ದ ಚಂದವಂ |
ಗಡ! ಪೊಸಬೆಳ್ಳಿದಾವರೆಗಳಾವೆಡೆಯೊಳ್ ನಡೆವಲ್ಲಿ ಪೊಯ್ದ ಪೂ ||

1. ನಾವವನೊಳನೇ. ಗ||

ಗುಡಿ ಗಡ! ಕೊಂಬುಗೊಂಡುಸಿರದಿರ್ಪ ಬಸಂತಸಿಪಾಕೆ ತಾನೆ ಪೆ |
ರ್ಗಡೆ ಗಡ! ಗೆಲ್ವ ತಕ್ಕಱಿಯಲಾದುದು ನಿಮ್ಮಲರಂಬನೆಂಬನಾ ||೧೮೩||

ಸಿರಿದುಂ ಮಾತಿನೊಳೇನೈ |
ಸರಲಂಗೆ ಪೊಡರ್ಪಿನೇಳ್ಗೆಯುಂಟಾದೊಡೆ ಚಿ ||
ಚ್ಚರದಿಂದೆತ್ತಿಸಿ ತಂದಿ |
ರ್ಪರ ಬಲ್ಪಂ ಬಟಿಕೆ ನೋಡು ನೀಂ ಕಾಳೆಗದೊಳ್ ||೧೮೪||

ವ|| ಎಂಬುದುಂ ಕೇಳ್ದು ಮತ್ತಮಾದೂದನಿಂತೆಂದಂ:—||೧೮೫||

ಎನ್ನೊಡೆಯನ ಬಲ್ಪಂ ನೀ |
ವಿನ್ನುಂ ಕಂಡಱಿದುದಿಲ್ಲ ಬಿದಿಯೆಂಬಣ್ಣಂ ||
ಬನ್ನಂಬಟ್ಟುದನಱಿಯನೆ |
ಮುನ್ನಂ ಮೆಯ್ಗಣ್ಣನಱಿಯನೇ ಪೊಡೆಯಲರಂ ||೧೮೬||

ಬಾನೆಡೆಯೊಳ್ ಸುಟಿದಾಡುವ |
ರೇನಱಿಯರೆ ರಕ್ಕಸರ್ಕಳಱಿಯರೆ ದಿಟದಿಂ ||
ಮಾನಸರಱಿಯರೆ ಬಾಸುಗಿ |
ತಾನಱಿಯನೆ ಮತ್ತಮಱಿಯದೇ ನೆಲನಸಿತುಂ ||೧೮೭||

ವ|| ಅಂತುಮಲ್ಲದೆಯುಂ, ನೀಂ ನಾಲ್ಕೆರಡು ಪಗಲೊಳೆಮ್ಮೊಡೆಯನ ಕೈಯ ನನೆಯ ಕೋಲ ಕಾಲಾಟಮಂ ಕಾಣ್ಬಿರೆನುತೋಲಗಸಾಲೆಯಂ ಪೊಱಮಟ್ಟು ತುರಿಪದಿಂ ಬಂದು, ಕಂಪುವೊಬಲಂ ಪೊಕ್ಕು, ತೆಱಪುವಾರ್ದು ನನೆವಿಲ್ಲ ಬಲ್ಲಹನಂ ಕಂಡು,—ಕಿತ್ತಡಿ ಸೆಱೆಯಂ ಬಿಡೆನೆಂದು ಕಾಳೆಗಮಂ ಮುಂದಿಟ್ಟುಕೊಂಡಿರ್ಪನೆನಲೊಡನೆ, ನನೆಗಣೆಯಂ ಕೆಲಬಲದ ಪಸಾಯ್ತರ ಮೊಗಮಂ ನೋಡಿ, ಮುಳಿಸಂ ಮುಕ್ಕುಳಿಸಿ, ನಸುನಗೆವೆರಸು ಇಂತೆಂದಂ :— ||೧೮೮||

ಉಡುವ ವುಲಿದೊವಲೊ ಕೈಯೊಳ್ |
ಪಿಡಿದಾಲಾಗುಳದ ಕೋಲೊ ಬಗರಿಗೆಯೋ ಕೆಂ |

ಜೆಡೆಯೋ ಪೂಸುವ ಬೂದಿಯೊ |
ಬಡಗೊರವಂಗೇಕೆ ತನಗೆ ಕಾದುವ ಬೆಸನಂ ||೧೮೯||

ಎನ್ನೆಡಗೈಯುಗುರ್ವಿಸುವ ಕರ್ಬಿನ ಬಿಲ್ಗೊನೆಯಲ್ಲಿ ಬಾರದಿ |
ಪರ್ನ್ನೆಗಮೆನ್ನ ಜೇವೊಡೆಯ ಬಲ್ಲುಲಿ ನಾಲ್ದೆಸೆಯಂ ಪಳಂಚದಿ ||
ಪರ್ನ್ನೆಗಮೆನ್ನ ಪೂಗಣೆಗಳೋವದೆ ಬೆನ್ನನೆ ಪೋಗಿ ನಾಂಟದಿ |
ಪರ್ನ್ನೆಗಮುಂಟು ತನ್ನ ಕಡುಸೊರ್ಕು ಬೞಿಕ್ಕದು ಪಾಱು ಪೋಗದೇ ? ||

ಕಡಲೊಳ್ ಮೆಯ್ಗರೆದಿರ್ದೊಡಂ ಪೊಡವಿಯೊಳ್ ಪೊಕ್ಕಿರ್ದೊಡಂ [ [1]ಬೆಟ್ಟದೊಳ್ |
ನಡೆದೇಱಿರ್ದೊಡಮುಳ್ಕುತುಂ ದೆಸೆಗಳೊಳ್ ಬಳ್ಕುತ್ತಡಂಗಿರ್ದೊಡಂ ||
ಕಡುಪಿಂದೊರ್ಮೆಯೆ ಪೂವಿನಂಬದಟರಂ ಮೆಯ್ವ್ದಾಗಿ ನೋಯಿಪ್ಪುದೇ |
ದೊಡೆ ಕೇಳಿನ್ನಯ ಬಾರಿಯೊಳ್ ತಿಸುಳಿ ತಾನಿನ್ನೆತ್ತ ಪೋಗಿರ್ದಪಂ ||

ಅದಟನಳುರ್ಕೆಯಂ ಕಿಡಿಸಲಾಂಬರಮೋ ? ತನಗೊಂದು ಕರ್ಬು ಸಾ |
ಲದೆ? ಮಱುದುಂಬಿ ಸಾಲದೆ? ಪಸುರ್ವಿಡಿ ಸಾಲದೆ? ಬಂದ ಮಾವು ಸಾ||
ಲದೆ? ಸುೞಿವಂಚೆ ಸಾಲದೇ? ಗೌಂಗುಱಿ ಸಾಲದೆ? ಕಾಯ್ತ ತೆಂಗು ಸಾ |
ಲದೆ? ಪೊಸನೀಱುವೆಣ್ಣನುಡಿ ಸಾಲದೆ? ತೆಂಕಣ ಗಾಳಿ ಸಾಲದೇ?||೧೯೨||

ವ|| ಎಂದು ಗದ್ದುಗೆವೊಯ್ದು ಕಣ್ಣ ಕೆಂಪು ಕಿಸುಸಂಜೆಯಂ ಪಸರಿಸೆ ದೆಸೆದೆಸೆಗೆ ಮಸಗೆ ನಿಸ್ಸಾಳಮಂ ಸೂಱೈಸಲ್ವೇೞ್ದಾಗಳ್ ||೧೯೩||

ಮಾಣದೆ ನಿಚ್ಚಮುಂ ಪೊಣ*ರ್ವ ರಾಯರ ತಕ್ಕಡಿಗಾಡ ಬಳ್ಕಿ ನೀ |
ದಾರ್ಣಮನಂಟುಗೊಂಡದಟರಾಗಳೆ ಬಾಯ್ವಿಡೆ ಸೊರ್ಕಿನಿಂದೆ ಕ ||
ಣ್ಗಾಣದ ಬೀರರುಗ್ಗಡಿಸೆ ಬಗ್ಗಿಪ ಕೋಗಿಲೆಯೆಂಬ ಪೊಯ್ಸ ನಿ |
ಸ್ಸಾಣದ ಬಲ್ಸರಂ ಕಿವಿಯ ಬಾನೆಡೆಯಂ ಬಳಸಿತ್ತು ಬೇಗದಿಂ||೧೯೪||

ಅದಟನಳುರ್ಕೆಯಂ ಕಿಡಿಸಿ ಬಿಂಕಮನಟ್ಗಿಸಿಯೆನ್ನ ಕೋಲ್ಗಳಿಂ |
ಸದೆದರೆವೆಣ್ಣನಂ ಬಿಡದೆ ಮಾಡಿ ಕಡಂಗಿ ನೆಲಂಗಳೊಳ್ ಸಮಂ ||

---

1. ಬೆಟ್ಟದಿ | ಟ್ಬಡೆಯೊಳ್ಗಟ್ಟದೊಳಿರ್ದೊಡಂ ದೆಸೆ. ಕ||

ತೊದವಿಸಿ ಪೆರ್ಮೆಯಂ ಸೆಳೆದು ಬಲ್ಮೆಯನಿಟ್ಟುಕೊಳಿಗೊಂಡು ಬೇಗದಿಂ |
ಕದಕದಪಂ ತೊಡರ್ಚಿಯೆಳೆದೇರನನೋಡಿಪೆನೆಂದು ಪೂಸರಂ ||೧೯೫||

ವ|| ಅಂತು ತೊಟ್ಟನೆ ಪಳಂಚಲೆದು ತನ್ನ ಮನದನ್ನರಪ್ಪ ಬಸಂತಮೆಲ್ಲೆಲರ್ಗಳೆಂಬ ಕೆಳೆಯರೊಡನೆ ಇಂದು ಪಡೆಯೆಲ್ಲಮಂ ಪಲವುಂ ಸನ್ನಣದಿಂ ಬರಲಿಮೆಂದು ಪೇಡೆ; ಕಮ್ಮಂಗಣೆಯನ ನುಡಿಯ ನಾಲಿಸಿ ಹಸಾದವನಿಟ್ಟು ಸುಗ್ಗಿಯುಮಾತೆಂಗಾಳಿಯು[1]ಮಿರ್ವರುಂ ಸಜ್ಜುವಂ ಪಡೆದು ಚೌವಂದದ ದಟಕಂ ಸೆಲವಿತ್ತೊಡಗೊಂಡು ಬರಿಯಾಗಳ್ ಪಲವೆಡೆಯ ಕಡೆಯ ಬಾಡಗಳ ಬನಂಗಳೊಳ್ ತಾಣಂದರವಾಗಿರ್ಪ ಕೆಂಗಣ್ವಕ್ಕಿಯಲರ್ವಕ್ಕಿ ಕನ್ನಡವಕ್ಕಿ ಪೊಣರ್ವಕ್ಕಿ ಮೊದಲಾದ ದಟ್ಟಿಯ ಕೂರಾಳ್ಗಳುಂ ತಂತಮ್ಮ ಪಡೆವೆರಸು ಬಂದು ಕಾಣ್ಬುದುಮವರಂ ಮನ್ನಿಸಿ ನಾಲ್ಕುಂ ತೆಱದ ಪುಸಿವಡೆಯಂ ಬಿಜ್ಜೆಯಿಂ ಪುಟ್ಟಿಸಿ ಮುಂಗುಡಿಯೊಳ್ ನಡೆವಂತೆ ಬೆಸಸಿ ಕಣ್ಗಂಬಾಗಿರೆ ಬೀರವಸದನಂಗೆಯ್ದು ||೧೯೬||

ಪಲವುಂ ಮೇಳದ ಬೀರರ್ |
ಕೆಲದೊಳ್ ಬರೆ ತುಱುಗಿ ಪಿಡಿದ ಬೆಳ್ಗೊಡೆ ಚೆಲ್ವಂ ||
ಗೆಲೆ ತನ್ನರಮನೆಯೊಳ್ ಸಿರಿ |
ನಲವಿಂ ನೆಲಸಿರ್ಪ ಪೊಟ್ಟಿನೊಳ್ ಪೊಱಮಟ್ಟಂ ||೧೯೭||

ಸೊಗಯಿಪ ತಳಿ*ರ್ದೋರಣವುಂ |
ನುಗುಳುತ್ತುಂ ಪಲರ ಪರಕೆಯಂ ಕೈಕೊಳುತುಂ ||
ಪೊಗ*ಳ್ವವರಂ ಮನ್ನಿಸುತುಂ |
ಬಗೆವುಗೆ ಪೊಱವೊಱಲನೆಯ್ದಿದಂ ನನೆಗಣೆಯಂ ||೧೯೮||

ಮೊಗಸಾಲೆ ಚಂಪೆಯಂ ಚೌ |
ಕಿಗೆ ಮೆಱುದಿರೆ ಹರಿಸದಿಂದೆ ಬೀಡಂ ಬಿಟ್ಟಾ ||

1. ಮಿರವತ್ತುಂ. ಗ||

ಪಗಲಂ ಕಳೆದಂದಿನ ಮಱು |
ವಗಲಂ ನಡೆದೆತ್ತಿ ಬರುತುಮಿರ್ದಂ ಕಾವಂ ||೧೯೯||

ವ|| ಆಗಳ್ ||೨೦೦||

ಅರಗಿಳಿವಿಂಡು ವಾರುವದ ಮೋಹರವಾಱಡಿವಿಂಡು ಬಿಲ್ಲ ಬೀ |
ರರ ಪಡೆ ಕೊಂಚೆವಿಂಡು ಪಲವಡ್ಡಣದೊಡ್ಡಮ*ಳ್ವಕ್ಕಿವಿಂಡು ಮೆ ||
ಯ್ವೆರಸುವ ಕೊಂತಗಾಱರಣೆಯಾಗಿರೆ ಬಂದು ಬಸಂತನೊಲ್ದು ಸಂ |
ವರಣೆಯನೆಯ್ದೆ ತೋಱು ತಲೆದೂಗಿಸಿದಂ ನನೆವಿಲ್ಲ ಬೀರನಾ ||೨೦೧||

ವ|| [1]ಅಂತೊಯ್ಯನೆ ಮುಂದೆ ಮೋಹರಂಬಡೆದು ತಳರ್ವ ಪುಸಿ
ವಡೆಯಲ್ಲಿ ||೨೦೨||

ಗಲ್ಲದ ಸೊರ್ಕುನೀರ ಪೊನಲಿಂ ನೆಲೆವೆರ್ಚೆ ಕಡಲ್ ತುಳುಂಕೆ ಬೆ |
ಟ್ಟೆಲ್ಲಮನೌಂಕುವಂತಿಡುವ ಕಾಲೊಳ್ವಱಯಿಂ ನೆಲನಾಱ ಬೇಗದಿಂ ||
ನೆಲ್ಲಿಯ ಕಾಯ್ಗಳಂ ಬಡಿಗೆ ಕೊಂಱವೊಲೆತ್ತಿದ ತೋರಹತ್ತದಿಂ |
[2]ಜಲ್ಲನೆ ತುಂಬಿಗಳ್ ಕೆದಱೆ ಬಂದುವು ಬಿಂಕದಿನಂಕದಾನೆಗಳ್ ||೨೦೩||

ತೊಳಗುವ ಪೊನ್ನ ಪಲ್ಲಣದ ನುಣ್ಬೆಳಗಾಗಸಮಂ ಮುಸುಂಕೆ ಪ |
ಜ್ಜಳಿಸುವ ಪಕ್ಕರಕ್ಕೆಗಳ ಗೆಜ್ಜೆಯ ಬಲ್ಲುಲಿ ನೀಳ್ದು ದಿಕ್ಕಿನೊಳ್ ||
ಬಳಸೆ ಕೊಡಂಕೆಯೊಳ್ ಪೊಳೆವ ಚೌರಿಯ ಗಾಳಿಯಕೋಳ್ಗೆ ಬೆಟ್ಟುಗಳ್|
ತಳರೆ ಪೊಗಟ್ತೆಯಂ ತಳೆದ ತೇಜಿಯ ತಟ್ಟು ತೆರಳ್ದುದೆತ್ತಲುಂ ||೨೦೪||

ಪೂಡಿದ ವಾರುವಂಗಳ ತೆರಳ್ಕೆಗೆ ನೇಸಱ ತೇರ ತೇಜಿಗಳ್ |
ಪಾಡಱದಿರ್ಪಿನಂ ಪರಿವ ಗಾಲಿಯ ಕೋಳ್ಗೆ ಕೆಳರ್ತು ಬೆಟ್ಟುಗಳ್ ||
ಕೂಡೆ ಸಡಿಲ್ವಿನಂ ಪೊಡೆವ ಬೀರರ ಜಂಕೆಗೆ ಗೊಂಟನಾನೆಗಳ್ |
ಕೋಡುವಿನಂ ಕಡಂಗಿ [3]ಪರಿತಂದುವು [4]ತೋರ್ಕೆಯ ತೇರ್ಗಳೋಳಿಯಿಂ||

1. ಅಗಳೊ. ಕ||
2. ಘಲ್ಲನೆ ತುಂಬಿಯಂ. ಗ||
3. ಕವಿತಂದು. ಕ||
4. ತೇರ್ಕೆಲದಾಳ್ಗಳೋಳಿಯಿಂ. ಗ||

ಸಿಡಿಲ ಪೊಡರ್ಪನೇೞಿಸುವ ಸಿಂಗಮನಂಜಿಪ ರಕ್ಕಸರ್ಕಳಂ |
ನಡುಗಿಪ ಮಾರಿಯಂ ಪೊಸೆದು ಮುಕ್ಕುವ ಮಿೞ್ತುವನೊತ್ತಿಸೊರ್ಕಿನಿಂ ||
ಪಿಡಿವ ಕಡಂಗಿ ನಿಂದ ಜವನಂ ಮುಱಿದಿಕ್ಕುವ ತಕ್ಕನಾಂತು ಮುಂ |
ಗುಡಿಯೊಳೆ ಬಂದುದಂದು ತುೞಿಲಾಳ್ಗಳ ಬಲ್ಲಣಿ ಗೆಲ್ಲವೆಂಬಿನಂ ||೨೦೬||

ಕುದುರೆಯ ತಟ್ಟುಗಳ್ ನೆರೆದ ಬಲ್ದೆರೆಯಂ ಪಿಡಿದಿರ್ದ ಬಾಳ್ಗಳು |
ಣ್ಮಿದ ನಿಡುವಾಳೆಯಂ ಬಿಳಿಯ ಸತ್ತಿಗೆಗಳ್ ನೊರೆವಿಂಡನಾನೆಗಳ್ ||
ಕೆದಱದೆ ಹಂತಿಗೊಂಡ ನೆಗೞಂ ಪೊಸತೇರ್ ಪಡಗಂ ನೆಗೞ್ಚೆ ಪೆ |
ರ್ಚಿದ ಕಡಲೆಂಬಿನಂ ಮಸಗಿ ಬಂದುದು ಪೆರ್ಬಡೆ ಕರ್ಬುವಿಲ್ಲನಾ ||

ವ|| ಅಂತು ಬೆಡಂಗುವೆತ್ತು ನಡೆವ ಪುಸಿವಡೆಯ ಪೆಱಗೆ ಪಡೆಯ ಪಾಡಿಯಂ ಕೂಡಿಕೊಂಡು ||೨೦೮||

ಮಿ*ಳಿರ್ವ ಪೊಸದಳಿರೆ ಪೞಯಿಗೆ |
ಗಿಳಿಗಳೆ ಪೂಡಿರ್ದ ಕುದುರೆ ತೆಂಗಾಳಿಯೆ ಕ ||
ಣ್ಗೊಳೆ ತೇರೆಸಗುವನೆನೆ ಬಂ |
ದೆಳಮಾವಿನ ತೇರನೇಱಿ ನಡೆದಂ ಕಾವಂ ||೨೦೯||

ತರದಿಂದೆತ್ತಿದ ಕೆಂದಾ |
ವರೆಗಳ್ ಕೆಂಗೊಡೆಗಳಂದಮಂ ಪಡೆವಿನಮಾಂ ||
ತರಸಂಚಿಯೆಂಬ ಸಾವಂ |
ತರ ಬಳಗಂ ಬಳಸೆ ಬಂದನಂದು ಬಸಂತಂ ||೨೧೦||

ನನೆಯೆಸಳಂದಮಾದ ಗುೞಿಮುಂ ಪೊಳೆಯುತ್ತಿರೆ ನೀಳ್ಪುವೆತ್ತ ಪೂ |
ವಿಸ ಪೊಸಟೆಕ್ಕೆಯಂ ಮಿಳಿರೆ ಪಕ್ಕದ ಕೋಗಿಲೆಯೆಂಬ ಗಂಟೆಗಳ್ ||
ದನಿಗುಡೆ ಕೈಯ ಕೋಳ್ಗೆ ಕಡುಗೂರ [1]ದವರ್ ದೆಸೆಯತ್ತ ಚೆಲ್ಲೆ ಮೆ |
ಲ್ಲನೆ ನಡೆತಂದುವಂದು ಪೊಸಮಾವೆನಿಪುಗ್ಗಡದಗ್ಗದಾನೆಗಳ್ ||೨೧೧||

---

1. ಗೊರವದೇಸಿಯುದತ್ತ. ಕ||. ಗೊರದಶಂದೆಸೆಯುಉತ್ತ. ಗ||

ಕೆಂದಳಿರ ಪಕ್ಕರಕ್ಕೆಗ |
ಳಂದಂಬಡೆದೆಸೆವ ಪಲ್ಲಣಂಗಳ ಸೊಂಪುಂ ||
ಸಂದಿಸೆ ನೀಳ್ಪಿಂ ನಡೆದುದು |
ಸಂದರಗಿಳಿಯೆಂಬ ಕುದುರೆಗಳ ದಟವೆತ್ತಂ ||೨೧೨||

ಮಿಸುಗುವ ಕೊಂಬಿನಚ್ಚು ಕಿಱುಗೊಂಬಿನ ತಳ್ತರಗೀಲ್ ಕವಲ್ತಕೊಂ |
ಬಿನ ಮಡವಡ್ಡವಂದ ನಳಿಗೊಂಬಿನ ಪತ್ತುಗೆ ಜೋಲ್ವ ಬಳ್ಳಿಗೊಂ ||
ಬಿನ ಬಳೆ ತೋರಗೊಂಬಿನ ನೊಗಂ ನಿಡುಗೊಂಬಿನ ಮೂಂಕುಕಣ್ಗೆ ಚೆ |
ಲ್ವೆಸೆ ನಡೆತಂದುವಂದಸುಗೆಯೆಂಬ ನೆಗಟ್ತೆಯ ತೇರ್ಗಳೆತ್ತಲುಂ ||೨೧೩||

ಕಿಱುಮುಗುಳ ಗೆಜ್ಜೆಯಿಂದಂ |
ಮಿಱುಗುವ ಕೆಂದಳಿರ ಹರಿಗೆ ಬಗೆಗೊಳೆ ಬಂದ ||
ತ್ತುಱದೆ ಮಱುಗೋಗಿಲೆಗಳಿಂ |
ಒಱಕೆಯ ಪೆಸ*ರ್ವೆತ್ತ ಹರಿಗೆಕಾಱರ ತಂಡಂ ||೨೧೪||

ಪಿಡಿದಲ*ರ್ವಿಲ್ಲುಂ ಮೆಲ್ಲಿಸ |
ಳುಡೆದೊವಲುಂ ಮಿಸುಪ ನನೆಯ ಮೊನೆಯಂಬುಂ ನೇ ||
ರ್ಪಡೆ ಮೇಲೆ ಮೇಲೆ ನಡೆದುದು |
ಗಡಣದೆ ಮಱುದುಂಬಿಯೆಂಬ ಬಿಲ್ಲಣಿಬೀರರ್ ||೨೧೫||

ಕಡುಸಿಮಿ*ರ್ದು ಪೊಳೆವ ಪೊಸಪೂ |
ಗುಡಿಯೆಂಬಗ್ಗಳಿಕೆವಡೆದ ಸಬಳಮನೊಲವಿಂ ||
ಪಿಡಿದು ಬರುತಿರ್ದುದೆತ್ತಂ |
ಕಡುಸೊರ್ಕಿದ ತುಂಬಿಯೆಂಬ ಡೊಂಕಣಿಕಾಱರ್ ||೨೧೬||

ವ|| ಅಂತು ನಡೆತರ್ಪ ಪಡೆವೆರಸು ನಿಚ್ಚವಯಣಂಬರುತಿ ಪಾರ್ಗಳ್; ಪಲವುಂ ಪರಿಯ ಪಕ್ಕಿಗಳ ಪೆರ್ಚಿದ ಸರಂಗಳಿಂ ಹರಣಂ ಬಡೆದಂತೆ ಪರಿವಡೆದು ತಿಂತಿಣಿವಡೆದ ಪೇರಡವಿಯೊಳ್ ಪೊಗಟ್ತವೆತ್ತು ||

(ಉತ್ಸಾಹ ವೃತ್ತಂ)

ತುಱುಗಿ ನಡೆವ ಮುಗಿಲ ನಡುವೆ ಪೊಳೆವ ಮಿಂಚಿದೆಂಬಿನಂ ।
ಮಿಱುಪ ತೆರೆಗಳೆಡೆಗಳೊಳಗೆ ಸುೞಿವ ಮಿಾನ್ಗಳಾವಗಂ ॥
ಮೆಱೆವ ತೊಱೆಯ ತಡಿಯ ತಳಿರ ಮನೆಗಳಲ್ಲಿ ನಿಚ್ಚಮುಂ ।
ಬಱದೆ ಮುಳಿದು ತಿಳಿಪೆ ತಿಳಿದು ನೆರೆವ ಬೇಡವೆಣ್ದಿರಿಂ ॥೨೧೮॥

ವ॥ ಗಾಡಿವಡೆದ ಕಾಡಂ ಪಿಂದಿಕ್ಕಿ ಮೆಲ್ಲಮೆಲ್ಲನೆ ನಡೆವಾಗಳ್ ॥

ಕಟ್ಟಿದ ತಂತಿಯಂ ಮಿಡಿದು ಗೊಂದಣದಿಂದರುಹಂತನೇಳ್ಗೆಯಂ ।
ನೆಟ್ಟನೆ ಪಾಡಿ ಸೋಲಿಸುವ ಸಗ್ಗದ ಪೆಣ್ದಿರ ನುಣ್ಚರಕ್ಕೆ [1]ಮೆ ॥
ಯ್ಗೆಟ್ಟೆಳವಲ್ಲಿಗಳ್ ಪಲವುಮಾಲಿಸೆ ಮೆಯ್ಸಿರಿವೆತ್ತ ತಪ್ಪಲಿಂ ।
ಬೆಟ್ಟಮದೊಂದು ದಿಟ್ಟಗೆಡೆಯಾದುದು ತೊಟ್ಟನೆ ಕರ್ವುವಿಲ್ಲನಾ ॥

ಅಂತು ನೆಗೞ್ದಿರ್ದ ಬೆಟ್ಟಂ ।
ಸಂತಸದಿಂ ನಿಂದು ನೋಡುತಿರೆ ಬಿನ್ನಪವೆಂ ॥
ದಿಂತೆಂದಂ ಕೈಮುಗಿದು ಬ ।
ಸಂತಂ ಜತಿಯೊರ್ವನಿಲ್ಲಿ ನೆಲಸದೆ ಮಾಣಂ ॥೨೨೧॥

ವ॥ ಎಂಬನ್ನೆಗಂ ॥೨೨೨॥

ಕೊಲ್ಲದುದೆ ದಿಟದಿನಱನೆಂ ।
ದೆಲ್ಲಾಪರಿಯಿಂದೆ ಪೇೞ್ದ ಪಿರಿಯರ ನುಡಿಯಂ ॥
ಬಲ್ಲಿತೆನೆ ನಂಬಿ ಬೇಂಟೆಯ ।
ನೊಲ್ಲದೆ ಬಿಟ್ಟಿರ್ದ ಬಿಯದರೊಪ್ಪಿದರದಱೊಳ್ ॥೨೨೩॥

ಮಡುಗಳೊಳಗಲರ್ದ ಪೂವಂ ।
ಕಡುನಲವಿಂ ಕಿಱಿದು ಬೇಗದಿಂ ಸವಣನ ಮೆ ॥
ಲ್ಲಡಿಗೆ ತಲೆದುಡಿಗೆಮಾಡುವ ।
ಪಿಡಿಗಳ್ ನೆಗೞ್ದಿರ್ದುವದಱ ತಪ್ಪಲ ಬನದೊಳ್ ॥೨೨೪॥

---

1. ಮೇ॥ ವುಗೆರಳೆವಲ್ಲಿ ಗ॥

ತೊಲಗದೆ ಗೆಡೆಗೊಂಡಿರ್ದುವು |
ಸಲೆ ಮುಳಿಸಂ ಬಿಟ್ಟು ಸೋಗೆಯುಂ ಪಾವುಗಳುಂ ||
ಪುಲಿಯುಂ ಮಱಿವುಲ್ಲೆಗಳುಂ |
ಕಲಿಸಿಂಗಮುಮಾನೆಯುಂ ಕರಂ ನಲವಿಂದಂ ||೨೨೫||

ವ|| ಅಂತು ಮೈಮೆವಡೆದ ಬೆಟ್ಟದ ಮೇಲೆ ಕೈಯೆತ್ತಿ ಪಲರುಂ ಜತಿಗಳ್ ತವಸಿಂಗೊಳಗಾಗಿ ||೨೨೬||

ಬಗೆ ನೊಸಲಲ್ಲಿ ಕೂಡೆ ನಿಲೆ ತಪ್ಪದೆ ಮೂಗಿನ [1]ಚೌಕದಲ್ಲಿ ದಿ |
ಟ್ಟಿಗಳಿರೆ ಮೆಯ್ಯ ಮಣ್ ಕೊರ[2]ಲ್ಗೆ ಪುತ್ತಿಡೆ ಪರ್ಬಿದ ಬಳ್ಳಿ ಸುತ್ತಲುಂ||
ಸೊಗಯಿಸೆ ಕೈಯನಿಕ್ಕಿ ಮಿಗೆ ತನ್ನನೆ ತಾನೊಲ್ಪಿಂದೆ ಜಾನಿಸು |
ತ್ತಗಲದೆ ನಿಂದನೊರ್ವ ಸವಣಂ ಬಗೆಗೊ[3]ಳ್ವೆಱೆ ತಟ್ಟತೆಂಬಿನಂ||೨೨೭||

ವ|| ಅವರಂ ಭೋಂಕನೆ ಕಟ್ಟದಿರೊಳ್ ಕಂಡು ಕಿಡಿಕಿಡಿಯೋಗಿ ಕರ್ವುವಿಲ್ಲನಿಂತೆಂದಂ:—ಇನ್ನೆಗಮೆನಗಿದಿರಾಗಿ ಮಲೆದು ಪೋಗದೆ ನಿಲ್ವ ತವಸಿಗಳನೊರ್ವರುಮಂ ಕನಸಿನೊಳಂ [4]ಕಂಡೆನಿಲ್ಲ, ಸವಣನೊರ್ವನೆ ತೊಲಗದಿದಿರಾಗಿ ನಿಂದಂ. ಇದರ್ಕೆ ತಕ್ಕುದಂ ಮಾಡ್ಪನೆಂದು ಕರ್ವು ವಿಲ್ಗೆ ಕೈಯಂ ನೀಡೆ ಬಸಂತನಿಂತೆಂದಂ:— ||೨೨೮||

ತನಗೆ ಸವನಪ್ಪವಂ ಪೊಣ |
*ರ್ದನೆ ಕಾದುವುದಜ್ಜನಪ್ಪವಂಗೆಱಗುವುದೆಂ ||
ಬಿನಿತೆ ವಲಮರಸುಗಾದೆಗ |
ಳನುವಂ ನೀನಱಿದು ಬಿಲ್ಗೆ ಕೈನೀಡುವರೇ? ||೨೨೯||

[5]ಪಟುವಗೆಗಳಾಱುಮಂ ಗೆ |
ಲ್ದಳವಿಂ ಕೈಯಿಕ್ಕಿ ನಿಂದ ಕಲಿಯೆಂದುಂ ತ ||

1. ಕೌತಲಲ್ಲಿ. ಕ|| 2. ಮೆಯ್ಯೊಳಚ್ಚಿ ಸಿಲವುತ್ತಿರೆ. ಕ||
3. ಳ್ವೆರೆವೆಂಟಿದೆಂಬಿನಂ. || ಗ. 4. ಕಂಡುದಿಲ್ಲ. ಗ|| 5. ದಳವಗೆ. ಗ||

ನ್ನೊಳಗುಂ ಪೊಱಗುಂ ತೋಱುವ |
ಬಳಿಯಂಗೆಱಗಿರ್ದು ಬಾೞ್ವುದೀಮೂಲೋಕಂ ||೨೩೦||

ಕಿಱುಕುಳನೆಂದೇಟಿಸಲೀ |
ತೆಱನಲ್ಲವೆ ಮುಂದೆ ನಿಂದ ಸವಣನ ರೂಪೇ ||
ತಱ ಮಾತೊ! ಗಂಡುತನಮಂ |
ಮೆಱೆ ತಿಸುಳಿಯೊಳೆಱಗು ಪಿಱಿಯವರ್ಗೆಳೆಯೊಡೆಯಾ ||೨೩೧||

ವ|| ಎನೆ ಗದಗದನೆ ನಡುಗಿ ಮುಂದೆ ತಿಸುಳಿಯಂ ಗೆಲ್ವುದರ್ಕೆ ಮುಡಿಗಿಕ್ಕುವಂತೆ ನಿಡುಗೈಗಳಂ ಮುಡಿಗಿಕ್ಕಿ ನಡೆದು, ಅಂತುಮಲ್ಲದೆಯುಂ || ||೨೩೨||

ಉಱದಟಲಿಂದಮಾತವಸಿಯಂ ಮುಳಿದೆಚ್ಚೊಡೆ ಕರ್ವುವಿಲ್ಲು ತಾಂ |
ಮುಱಿಯದೆ ಪೂವಿನಂಬು ಕರಿಕೇಱದೆ ತುಂಬಿಯ ನಾರಿ ಬೇಗದಿಂ ||
ಪಱಿಯದೆ ತನ್ನ ನಚ್ಚಿನೆಲರೊಯ್ಯನೆ ಜಾಱದೆ ಬಂದ ಮಾವು ಬೀ |
ತೊಱಗದೆ ಗಂಡುಗೋಗಿಲೆಯ ಸೊರ್ಕೊಳಸೋಱದೆ ಸೈತೆ ಪೋಕುಮೇ ||

ವ|| ಎಂದು ಬಗೆವರ [1]ಬಗೆ ಪಿಂದುಱಿಯೆ ತಳರ್ದು ಬನಂಬಿಡಿದು ಕಟ್ಟುದ್ದವಾಗಿ ಬೆಳೆದ ಬಿದಿರ ಕೊನೆಯ ಕೋಳ್ಗೆ ಪಱಿವಱಿಯಾದ ಮುಗಿಲ ಪೊೞೆಯಿಂ ಸುರಿವ ಮುತ್ತುಗಳಂ ಕಾರ ಮುಂಬನಿಯ ತಂದಲೆಂದು ಬಂದು ನುಂಗಲಂಗೈಸುವ ಚಾದಗೆಯ ಮಱಿಗಳುಮಂ, ಬೆಂಗದಿರ್ಗಂ ತಣ್ಗದಿರ್ಗಂ ತೆಱಪುಗುಡದ ಮರದುಱುಗಲ ಕಟ್ಟಲೆಯಂ ಕಾರಿರುಳ್ಗೆತ್ತು ಸುಟಿಯಲನುಗೆಯ್ವ ಗೂಗೆಗಳುಮಂ, ತನಿವಣ್ಣಗೊಂಚಲಿಂ ಮಿಂಚುವಡೆದ ಮೇಲ್ಮರನನಡರ್ವ ಕೋಡಗಂಗಳ ಬಳ್ಳಿವಾಲಮನೆಳನಾಗರೆಂದು ಸೆಳೆದುಕೆಡಪಿ ಕಡಿದೀಡಾ[2]ಡಲವ್ವಳಿಸುವ ಮುದಿ[3]ಮುಂಗುಲಿ

---

1. ಬಗೆಗಿಂತೆಂದು ತಿಳಿದೆಳರ್ದು ಬನ್ನಂ. ಗ||
2. ಡಲಡಹಡಿಸುವ. ಖ|| 3. ಮುಂಗುರಿ. ಗ|| ಖ||

ಗಳುಮಂ, ಕಡವೆ ತುಟಿದು [1]ಕದಡಿದೆಡೆಯೊಳಿಲೆ ಕಟಲ್ದು ಕೆಡೆದ ತೋರ ಗೊಂಬುಗಳಂ ಪೆರ್ವಾವೆಂದು ಪೊರ್ದಲಂಜಿ ಗೆಂಟಱೊಳ್ ತೂಗಿ ನೋಡಿ ಪೆಱಕಾಲೊಳೋಡುವ [2]ಕಿಱುನರಿಗಳುಮಂ, ಈಡಿಱುವ ಕಾಡಾನೆಗಳ ಕೋಡ ಪೊಯ್ಲಿಂದುದಿರ್ದೆತ್ತಲುಂ ಪರೆದ ಗುರುಗುಂಜಿಯಂ ನೋಡಿ ಕೆಂಬರಲೆಂದು ಬಗೆದು ಬೇಗದಿಂದಾಯಲೆಂದುಜ್ಜುಗಿಪ ಬಿಯದರೆಳವೆಣ್ದಿರುಮಂ, ಬಿಱುಗಾಳಿಯ ಪೊಯ್ಲಿಂ ನೆಗೆದೊಗೆದ ಬಿದಿರ ಬಲ್ಲುಲಿಯಿಂ ಬೇಡರ ಬಲ್ಲುಲಿಯಿನೆಲ್ಲಿಯುಂ ನಿಲ್ಲದೆ ತಲ್ಲಣದಿನೋಡಲೊಡರ್ಚುವೆಳವುಲ್ಲೆಗಳುಮಂ, ಸುಟಿಗಾಳಿಗೆ ಸುಟಿಯೆ ನೆಗೆದು ಪಾಱುವ ತಱಗೆಲೆಯ ತುಱುಗಲಂ ಕಿಱುವಕ್ಕಿವಿಂಡೆಂದು ಕೊಟಂಡುಗಳಂ ಮಡು ಮಿಡಿವಿಲ್ಲೊಳಿ ಸಲಿಸಗಿ ಮಱುಗುವ ತುಱುಗಾವ ಕಿಱುಕುಳದ ಕೆಳೆಯರುಮಂ ನೋಡುತ್ತುಂ ನಿಚ್ಚವಯಣದಿಂ ಬರೆವರೆ ||೨೩೪||

(ಮಾಲಿನೀ ವೃತ್ತಂ)

ಬಿಡದೆಸಪೆಲರಿಂದಂ ಪೊಣ್ಮುತಿರ್ಪಚ್ಚಗಂಪಂ |
ಪಿಡಿವಲ*ರ್ಗಳ ಜೊಂಪಂ ಜೋಲ್ದು ಚೆಲ್ವಾಗೆ ಬಿಣ್ಪಿಂ ||
ದಿಡಿದ ಮರಗಳಿಂದಂ ಬೆಳ್ಳಿವೆಟ್ಟಕ್ಕೆ ನಿಚ್ಚಂ |
ಪಡಿಯೆನಿಸುವುದೆತ್ತಂ ರನ್ನಗಲ್ಲೆಂಬ ಬೆಟ್ಟಂ ||೨೩೫||

ಹರಿಸದೆ ಕೂಡುವ ಬಿಜ್ಜೋ |
ದರಿಯರ ಕೊರಲುಲಿಗಳಿಂದಮಂತಾಬೆಟ್ಟಂ ||
ಬಿರಯಿಗಳ ಮೊತ್ತಮಂ ಚ |
ಪ್ಪರಿಪಂತಿರೆ ಸಾರ್ದು ನೋಡಿದಂ ನನೆಗಣೆಯಂ ||೨೩೬||

ನೋಟ್ಪರ ಕಣ್ಗಚ್ಚರಿಯಂ |
ಮಾಟ್ಪವೊಲಾಗಸಮನಣೆವ ಕೋಡುಂಗಲ್ಲಿಂ ||

1. ಕರದದೆಡೆಯೊಳ್. ಖ|| 2. ಕೇರುವರಂಗ. ಖ|| ಕಿರುಕುಳರ. ಗ||

ನೀಳ್ಪಂ ತಳೆದಾಬೆಟ್ಟದ |
ತಾಝ್ಪುದಿದ ಬನಂಗಳಲ್ಲಿ ಬೀಡಂ ಬಿಟ್ಟಂ ||೨೩೭||

ವ|| ಆಗಳೆಡೆಗಿಱಿದ ಪೂಗುಡಿಯ ಗುಡಿಗಳೊಳಂ, ನೆಗೆದ ಸುರ ಹೊನ್ನೆಯ ಮೊಗಸಾಲೆಯೊಳಂ, ಮಡಲ್ಗೊಂಡ ಮಲ್ಲಿಗೆಯ ಮಂಡವಿಗಳೊಳಂ, ಸಂಪಗೆಯ ಜೊಂಪದ ಚಂಪೆಯದೊಳಂ, ಕಂಪನಪ್ಪಿದಿರವಂತಿಯ ಕಾವಣಂಗಳೊಳಂ, ಗಾಡಿವಡೆದ ಬಕುಳದ ಗೂಡಾರದೊಳಂ, ಬೀಗಿ [1]ಪಟಪಟನೆ ಬೆಳೆದ ಬಾಳೆಯ ತಿವುರಿಯೊಳಂ, ಸೊಂಪಾದ ಪಾದರಿಯ ಚೌಕಿಗೆಗಳೊಳಂ, [2]ಬಿಟ್ಟ ಬೀಡು ಬರೆದಂತೆ ಕಂಡರಿಸಿದಂತೆ ಕಣ್ಗೆಸದಿರ್ದುದನ್ನೆಗಮಿತ್ತಲ್ ||೨೩೮||

ಪೂಗಣೆಯನೆತ್ತಿ ಬಂದುದ |
ನಾಗಳೆ ಸಿವನಱಿದು ನೊಸಲ [3]ಕಣ್ಪಾಯ್ದುವನಂ ||
ಬೇಗದೆ ನಡೆದವನೊಳ್ ನೀಂ |
ತಾಗೆನೆ ನಸುನಗುತುಮಾತನಂದಿತೆಂದಂ ||೨೩೯||

ನೆಲನಂ [4]ಪೋಗೊದೆಯೆಂಬುದೇ[5]ನುಗಿದು ಬೆಟ್ಟಂ ಹಿಟ್ಟುಮಾಡೆಂಬುದೇ|
ನುಲಿದೆಣ್ಟುಂ ದೆಸೆಯಾನೆಯಂ ಪಿಡಿದು ಕೋಡಂ ಕಿಟ್ಟು [6]ತಾರೆಂಬುದೇ||
ನೆಲೆ ಪೆರ್ವಾರಿಯನಾವಗಂ ಪೊಸೆದು ನೀಂ ಮುಕ್ಕೆಂಬುದೇ[7]ನಕ್ಕದೀ |
ಯಲ*ರ್ವಿಲ್ಲಾತನ ಪಾಡಿಯಂ [8]ಕಡುಪಿನಿಂ ತಾಗೆಂಬುದೇಂಬೀರಮೇ? ||

ವ|| ಮತ್ತಮೊರ್ವಂ ಮೂದಲಿಸಿಯಲ್ಲದೆ ತಾಗದ [9]ಮುನ್ನೆಱಗಿದಲ್ಲದಿಱಿಯದ ಸಾಱಿದಲ್ಲದೆ ಕೊಲ್ಲದ ಮುಱಿಯಿಱಿದಲ್ಲದೆ [10]ಮೊರೆದೆಸೆಯದ ಪೆಸರಂ ತಳೆದ ಕೂರಾಳಿಂತೆಂದಂ :— ||೨೪೧||

---

1. ಒಳ್ಪೊಳನೆ. ಖ|| 2. ಬೀಡಂ ಬಿಟ್ಟು. ಖ|| ಗ|| 3. ಗಣ್ಣಾಯ್ದು. ಖ|| ಗ||
4. ಪೊಗತಿದೆ. ಗ|| ಪಾಣದೆ. ಕ|| ಖ|| 5. ನೊಗೆದ. ಕ|| ಖ||
6. ತಾಯೆಂಬು. ಕ|| 7. ನಕ್ಕಟೀ. ಗ|| 8. ಕಳುಪಿನಂ ತಾರೆಂ. ಕ||
9. ಮುನ್ನೆಳನಲ್ಲಡಿದರಿಯಲ್ಲದೆ. ಕ|| ಖ|| 10. ಹೆರೆತೆಗೆಯದ. ಕ|| ಖ||

ಕಡುಮುಳಿದೋಡಿ ನಿಂದ ತುಟಿಲಾಳ್ಗಳನಾಂ ತಱಿದೊಕ್ಕಲಿಕ್ಕದಿ |
ರ್ದೊಡೆ ಬಿಡದಾಂತ ಸೂನಿಗೆಯ ಭಂಡಿಗಳಂ ಸಿಡಿಲಂತೆ ಪೊಯ್ಯದಿ ||
ರ್ದೊಡೆ ನಡೆತರ್ಪ ತೇಜಿಗಳನೋವದೆ ಭಂಡಣದಲ್ಲಿ ಸೀಬದಿ |
ರ್ದೊಡೆ ಪೆಸರಾನೆಯಂ ಮುಱಿಯದಿರ್ದೊಡೆ ನಚ್ಚಿನ ನಿನ್ನಲೆಂಕನೇ ? ||

ಮಿಸುಪ ಸುಲಿಪಲ್ಲ ಬೆಳಗೆ |
ಣ್ದೆಸೆಯಂ [1]ಪರಿದಡ*ರ್ದು ಪೊಳೆವ ಜೊನ್ನದ ಸೊಂಪಂ ||
ಮಸುಳಿಸೆ ಮತ್ತಮದೊರ್ವಂ |
ಬಿಸುಗಣ್ಣನ ಮುಂದೆ ನಿಂದು ತಾನಿಂತೆಂದಂ ||೨೪೩||

ಕೊಂಡಾಡುವ ಕಾಲ್ಗಾಪಿನ |
ಗಂಡರ್ಕಳನಟಿಸಿ ಕೆಡಱಿ [2]ನಿಟಿಲೆನೆ ಮುಱಿವೆಂ ||
ಭಂಡಣದೆಡೆಯೊಳ್ ಬಾಜಯ |
ದಿಂಡಂ ಮುಱಿವಂತೆ ಕಾವನಾನೆಯ ಕೊಂಬಂ ||೨೪೪||

ವ || ಮತ್ತಮೊರ್ವಂ ತಕ್ಕಿನ ರಕ್ಕಸ [3]ರನೊಕ್ಕಲಿಕ್ಕಿದ ಪೆಸರ ಪೇರಱಿಕೆಯೊಳಿಂತೆಂದಂ :— ||೨೪೫||

ತೊಱೆಯಂ ಪೊಕ್ಕಾದಂ ಮೆ |
ಯ್ಯಱಿಯದೆ ಸೊರ್ಕಾನೆ ಮುಳಿದು ಬೆಳ್ದಾವರೆಯಂ ||
ಮುಱಿವವೊಲಾಕಾಳೆಗದೊಳ್ |
ತಱಿಸಂದೊಳವೊಕ್ಕು ಮಱಿವೆನಾತನ ಕೊಡೆಯಂ ||೨೪೬||

ಬಂದ ಕಡುಗುದುರೆ ಪೊಲದೊಳ್ |
ನಿಂದವರಂ ತಿವಿದುವಕಟ ! ನೋಡಿರೆ ತಾನಿಂ ||
ತೆಂದಱಿಯಬಾರದಿದು ಪೊಸ |
ತೆಂದೊರ್ಮೆಯೆ ಪೊಱಗೆ ಪುಯ್ಯಲಾದತ್ತಾಗಳ್ ||೨೪೭||

---

6. ಪಿಡಿ. ಕ|| 7. ನೆಟ್ಟಗೆ. ಗ|| 8. ಸರೊಳೊಪ್ಪೆಸರದರಿಕೆಯೊ. ಗ||

ವ|| ಅಂತಳುರ್ವ [1]ಮಾಸಬುದಮಂ ಕೇಳ್ದು—ಇವು ಕಾವನ ಕುದುರೆಗಳಾಗದೆ ಮಾಣವೆಂದು ಬಗೆಯೊಳಿಟ್ಟಣಿಸಿ ಕಡುಮುಳಿದು

ಪೊಸತಪ್ಪ ಕಡಲಿದೆಂಬಂ |
ತೆಸೆದೊಪ್ಪಿರೆ ತ್ರಿಸುಳಿ ಬೇಗದಿಂ ಪುಟ್ಟಿಸಿದಂ ||
ಪುಸಿವಡೆಯಂ ಕಡುಮೆಱೆದಿರೆ |
ಪಸರಂಬಡದಾನೆಕುದುರೆತೇರಾಳ್ಗಳುಮಂ ||೨೪೯||

ವ|| ಅಂತು ಪುಟ್ಟಿಸೆ ಮೊದಲಿಗನಪ್ಪ ಬಿಸುಗಣ್ಣೊಳೊಗೆದ ಬೀರಂ ತನ್ನೊಡನಾಡಿಗಳಪ್ಪಗ್ಗದ ಬೀರರ್ವೆರಸು ಆಪಡೆಯಂ ಕೂಡಿಕೊಂಡು ಸೂಳೈಸುವ ನಿಸ್ಸಾಳದ ತಾಟಿಸುವ ತಂಬಟದ ಬಾರಿಸುವ ಬೀರವಱೆಯ ಪೊಡೆವ ಡಕ್ಕೆಯ ಪಿಡಿದ ಬಿರುದಿನ ಕಾಳೆಯ ಬಲ್ಲುಲಿಯ ಸಡಗರಮೆಲ್ಲಾ ದೆಸೆಗಳಂ ಕಿವುಡುವಡಿಸೆ, ಮುಂಜುವೆಟ್ಟದಿಂ ಪೊಱಮಡಲೊಡನೆ ||೨೫೦||

ಏಱಸಗೆ[2]ಯೂಂತ ನೀಳ್ದ ಪೊಸಟೆಕ್ಕೆಯಮೊಪ್ಪಿರೆ ಬರ್ಪ ಗಾಲಿಯಿಂ |
ತಾನೊಳಗಾದ ಬೆಟ್ಟು ಪುಡಿಯಾಗಿರೆ ಪೆರ್ಚಿದ ಕಾಲ ದೂಳಿಯಿಂ ||
ಬಾನೆಡೆ ನಾಡೆಯುಂ ಪೊಡವಿಯಂತಿರೆ ಕೈದುಗಳಿಂದೆ ಬಂದುವಂ |
ದಾನೆಗಳೊಡ್ಡು ತೇರ್ಗಳಣಿ ತೇಜಿಯ ತಟ್ಟುಲಿವಾಳ ಮೊಗ್ಗರಂ ||೨೫೧||

ತರದಿಂ [3]ಮೇಲೋಗೆದಿರ್ಪ ಪೀಲಿದಟಿಗಳ್ ತಳ್ತಾಗಸಂ ರೂಪುಗೆ |
ಟ್ಟಿರೆ ಕೂರ್ವಾಳ ತೊಳಪ್ಪ ನುಣ್ಬೊಗರದೆತ್ತಂ ಪರ್ವೆ ಕಾರ್ಮಿಂ[4]ಚಿನಂ ||
ತಿರೆ ಬಿಲ್ಲಾಳ್ಗಳ ಬಲ್ಸರಂ ದೆಸೆಗಳಂ ತಳ್ಪೊಯ್ಯೆ ಮಾಱಾಂತ ಬೀ |
ರರ[5]ಸೊರ್ಕೋರ್ಮೊದಲೋಡೆಬಂದು[6]ದಳವಿಂ ಪಾಡಿಂತು ಮುಕ್ಕಣ್ಣನಾ||

---

1. ಮಾದವಮಳಾರವಮಂ. ಖ||
2. ಯಂತೆ. ಕ||
3. ಮೇಗೊ. ಖ||
4. ಚನೆ| ಯ್ತರೆ. ಕ|| ಖ||
5. ಸೋಂಕು. ಕ|| ಖ||
6. ದೊಲವಿಂ. ಗ||

ಕೆಲಬರ್ ಬಟ್ಟೆಯ ಬೆಟ್ಟನಾರ್ದೊಡೆದು ಸೆಂಡಾಡುತ್ತುಮೆಕ್ಕೆಕ್ಕೆಯಿಂ |
ಕೆಲಬರ್ ಸಿಂಗಮನೊತ್ತಿ ಪಲ್ಲಣಿಸಿ ಬಲ್ಪಿಂದೇಱುತುಂ ಬೇಗದಿಂ ||
ಕೆಲಬರ್ ಪೆರ್ಚಿದ ನೇಸಱಂ ನೋಣೆಯುತುಂ ಕೈನೀಡಿ ಮುನ್ನೀರ್ಗಳಂ |
ಕೆಲಬರ್ ಪೀರ್ದಱಿವಾಡುತುಂ ನಡೆದರೆತ್ತಂ ಬೀರರಾಪಾಡಿಯೊಳ್ ||

ಪೊಡವಿ ನಿಲಲಾಱದೊಲೆದೋ |
ಗುರ್ಡಿಸುಗುಮೆಂದಲ್ಲಿ ಬೆಟ್ಟನಿಟ್ಟಾಸಿಂದಂ ||
ಪಿಡಿದೆಣ್ದೆಸೆಯಾನೆಗಳಂ |
ಕಡುನಲವಿಂದೇಱಿ ಬರುತುಮಿರ್ದರ್ ಕೆಲಬರ್ ||೨೫೪||

ಬಿಸುಪಮುರ್ದ ನೊಸಲ ಕಣ್ಣಿಂ |
ತಿಸುಳಂಗಳನಾಂತ ಕೈಗಳುಂ ಸೋಲ್ಪರನಂ ||
ಜಿಸೆ ನಡೆತಂದರ್ ಕೆಲಬರ್ |
ಪೆಸರಾಳ್ಗಳ್ ಬೆಟ್ಟನಣ್ಣೆಕಲ್ಲಾಡುತ್ತಂ ||೨೫೪||

ತಕ್ಕಿನೊಳಾಂತಾಜವನೊಳ |
ವೊಕ್ಕಿವೊಳ್ ಪೊಣರ್ದನಾದೊಡಂ ಮಿಗೆ ಸುಗಿವಂ ||
ತಿಕ್ಕುವೆವೆನುತ್ತೆ ಸಾಸಿಗ |
ರೆಕ್ಕೆಕ್ಕೆಯಿನಿರದೆ ಕೆಲಬರಿದಿರೇಟ್ಟಂದರ್ ||೨೫೬||

ವ|| ಅಂತಾಗಸವಿಾಂದಂತೆಯುಮೆಳೆ ಬೆಸಲಾದಂತೆಯುಂ ಮು
ನ್ನೀರ್ ಮೇರೆವರಿದಂತೆಯುಂ ನಡೆದು ಭಂಡಣದೆಡೆಯೊಳ್ ತಂಡತಂಡ
ದಿಂದೆಡ್ಡಮಪ್ಪಂತೊಡ್ಡಿ ನಿಲಲೊಡನೆ ||೨೫೭||

ಕಾಲಾಳ್ಗಳ ತೇರ್ಗೋಡೆಯರ |
ಮೇಲಾಳ್ಗಳ ಜೋದರುಲಿಗಳೆಣ್ಬಂ ದೆಸೆಯೊಳ್ ||
ಕಾಲೂಱಿ ತಕ್ಕು ನಿಂದುದು |
ಮೇಲೊಡ್ಡಿದುದ್ದೈದೆ ಬಂದ ಮಾರ್ಪಡೆಯನಿತುಂ ||೨೫೮||

ಕುಱುಪಿನ ಮಾಣಿಕವರಿಗೆಯ |
ತೆಱಪುಗಳೊಳ್ ಪೊಳೆವ ಬಾಳ ಬೆಳ್ವೆಳಗಂದೇಂ ||
ಮೆಱೆದುವೊ ಕೆಮ್ಮುಗಿಲೆಡೆಯೊಳ್ |
ಮಿಱುಗುವ ಮಿಂಚೆಂಬ ತೆಱದಿನೆರಡುಂ ಪಡೆಯೊಳ್ ||೨೫೯||

ಪಡೆಯಿಂದವೊಗೆದು ಪರ್ವಿದ |
ಪುಡಿ ಮೆಯ್ಯಂ ಪತ್ತಿ ಪೋಗಿ ಬಾಂದೊಱೆಯಂ ಪೊ ||
ಕ್ಕಡಿಗಡಿಗೋಲಾಡುವವೊಲ್ |
ಕಡುನೆಗೆದೊಪ್ಪಿದುವು ಮಿಳಿ*ರ್ವ ಕೆಂಬಟವಿಗೆಗಳ್ ||೨೬೦||

ಪೊಸ[1]ಪಸಗೆಯ [2]ಮಂಜಿಟಿಗೆಯ |
ಮಿಸುಗುವ [3]ದೋರಿಯದ ಪಟಿಯ [4]ಪುಲ್ಲಿಯ [5]ಸೊಂಪಂ ||
ಪಸರಿಸಿದ ಪಕ್ಕರಕ್ಕೆಗ |
ಳೆಸೆದಿರ್ದುವು ತರದಿನೊಡ್ಡಿದೆರಡುಂ [6]ಪಡೆಯೊಳ್ ||೨೬೧||

ಬೆಚ್ಚಂತಾನೆಯ ತಟ್ಟನೊ |
ಳಚ್ಚರಿಯಂ ತಳೆದ ಟೆಂಚೆಯಂಗಳ್ ನಡೆನೋ ||
ಟ್ಪಚ್ಚಿಗೆ ಚೆಲ್ವಂ ಬೀಱದು |
ವಚ್ಚರಸಿಯರೇಱ ಬಂದ ಪಾಱನ ತೆಱದಿಂ ||೨೬೨||

ಪರಿಗೆಗಳಲ್ಲಿ ಕೀಲಿಸಿದ ಗೆಜ್ಜೆಯ [7]ಬಚ್ಚಣೆವೆತ್ತ ಬಿಲ್ಗಳ |
ಚ್ಚರಿಗೆಡೆಯಾದ ಕನ್ನಡಿಯ ಕೂರ್ಪಿನ ಡೊಂಕಣಿಯಲ್ಲಿ ಜುಂಜಿನಂ ||
ತಿರೆ ಮಿಳಿ*ರ್ದಾಡುತಿರ್ಪ ಪೊಸಚೌರಿಯ ದಿಟ್ಟಿಗಳುಳ್ಕೆ ಮಿಂಚುಬಿ |
ತ್ತರಿಸುವ ತೋಳ ಬಾಳ ಪರಿ ನಾಡೆಯುಮೊಪ್ಪಿದುದಿರ್ವಲಂಗಳೊಳ್ ||

ವ|| ಆಗಳೆರಡುಂ ಪಡೆಯೊಡೆಯರ್ ಕಾದುವ ಪೊಟ್ತುಱದು ಕಡುಮುಳಿದು ಕೈಯ ಕುಂಚವಮಂ ಬೇಗಬೇಗಂ ಬೀಸಲೊಡನೆ ||೨೬೪||

1. ಪಚ್ಚೆಯ. ಕ|| ಖ|| 2. ಮಂಜಟಿಕೆ. ಖ|| 3. ಪಾರಿಯ. ಕ||
4. ಪೂಲಿಯ. ಕ|| 5. ಸೊಂಪಿಂ. ಖ|| 6. ದೆಸೆಯೊಳ್. ಖ|| 7. ಬಚ್ಚಣೆ. ಖ||

ತಡಿವಿಱಾಱು ಬಂದು ತೆಂಕಣ |
ಬಡಗಣ ಕಡಲೊಂದನೊಂದು ತಾಗುವ ತೆಱದಿಂ ||
ಬಿಡೆ [1]ಗಜಱು ಮಿಕ್ಕು ತಕ್ಕಿಂ |
ಪಡೆಯೆರಡುಂ ದೆಸೆಗೆ ಮಸಗಿ ತಾಗಿದುದೆತ್ತಂ ||೨೬೫||

ವ|| ಆಗಳಾಗಸಕ್ಕೆ ನೆಗೆದು ಪರ್ವಿದ ದೂೞಿಗೞ್ತಲೆಯೊಳ್ ತಂತಮ್ಮ ಪಿಡಿದ ಬಾಳ್ವೆಳಗಿಂ ಮಾಱೊಡ್ಡಂ ಕಂಡು ಕಾಲಾಳ್ ಕಾಲಾಳ್ಗಳೊಳ್ ಕುದುರೆಗಳ್ ಕುದುರೆಗಳೊಳ್ ತೇರ್ಗಳ್ ತೇರ್ಗಳೊಳ್ ಆನೆಗಳಾನೆಗಳೊಳೋವದೆ ಕಾದಿ ಮೆಯ್ಗಳಿಂ ಜುಮ್ಮನೆಚ್ಚುಪಾಯ್ವ ಪೊಸನೆತ್ತರಿಂ ನೆಗೆದ ದೂೞಿಯಂ ನಂದಿಸಿ ಪೆಱದೆಗೆಯಲೊಡನೆ ||೨೬೬||

ಕಡುನೆಗೆದಬ್ಬರಂ ಮೊಱಗಿನಂತಿರೆ ಬಿಲ್ಲೊಳಮರ್ಕೆವೆತ್ತ ಕ |
ನ್ನಡಿಗಳ ಬಳ್ಳಿವೆಳ್ಪು ಕುಡುಮಿಂಚಿನವೋಲಿರೆ ಗಾಳಿವಟ್ಟೆಯೊಳ್ ||
ನಡೆವನ ಕಾಯ್ಪು ತಣ್ಣಗಿರೆ ಕಾರ್ಮುಗಿಲೊಡ್ಡುಗಳಿಂತಿವೆಂಬಿನಂ |
ಗಡಣಿಸಿ ಬಂದು ಕೋಲ ಮಱೆಯಂ ಕಱೆದರ್ [2]ಮಿಗೆ ಬಿಲ್ಲ ಬಲ್ಲಹರ್||

ಮಸಗಿ ಕವಿದಾರ್ಪಿನಿಂ ಬ |
ಗ್ಗಿಸಿ ನಾಲ್ಕುಂ ದೆಸೆಗೆ ಸರಲ ಸರಿಯಂ ಸುರಿವಂ ||
ತಿಸುವವ*ರ್ಗಳ ಕೈಯೊಳ್ ನಿ |
ಟ್ಟಿಸಬಾರದು ತುಡುವ ಬಿಡುವ ಪವಣಂತಾರ್ಗಂ ||೨೬೮||

ತಪ್ಪದೆ ನಟ್ಟಲ[3]ಗಿಂದಂ |
ತೊಪ್ಪನೆ ಕರುಳೊಕ್ಕು ಜೇಗದಿಂದಂ ನೆಲದೊಳ್ ||
ಕುಪ್ಪಳಿಸಿದೊಡಂ ಬೀೞದೆ |
ಚಪ್ಪರಿಸುತ್ತೆಚ್ಚರೆಕ್ಕೆಯಿಂ ಬಿಲ್ಲಾಳ್ಗಳ್ ||೨೬೯||

---

1. ಗಜರು. ಖ|| 2. ಬಲುಬಿಲ್ಲ ಬಿತ್ತಗರ್. ಖ|| 3. ಗಿಂಬಂ. ಗ|| ಖ||

ಕಣೆ ತೀರೆ ಕಟ್ಟಿದಲಗಿಂ |
[1]ಮಣಿಯದೆ ಕೀಱ್ಕೃದುಗೊಂಡು ಕಡುಮುಳಿಸಿಂ ಬಿ ||
ಲ್ಲಣೆ ತಳ್ತಿಱಿಯುತ್ತಿರ್ದುದು |
ಖಣಿಲೆನೆ ತಲೆ ಪಱಿದು ಪೊಡವಿಯೊಳ್ ಬೀೞ್ವಿನೆಗಂ ||೨೭೦||

[2]ಪೊಡೆದಾಡುತೊರ್ವ ಬಿಲ್ವಡೆ |
ಪಡಲಿಡೆ ಕಂಡಾರ್ದು ಪರಿಗೆಕಾಱರ ತಂಡಂ ||
ನಡೆದು ಪಳಂಚಿದುದುರಿದಾ |
ಗಡೆ ಮುಗಿಲೊಂದೊಂದಱೊಳ್ ಪಳಂಚುವ ತೆಱದಿಂ ||೨೭೧||

ತೊಲಗದ ಕಂಬದಾನೆಯ ಪಸುಂಬ[3]ನ ಪಕ್ಕಿಯ ಸೂಲ ಸೂಲದಿಂ |
ಗಿಲಿತದ ಗಂಡಗತ್ತರಿಯ [4]ಗೂಳಿಯ ಪಂದಿಯ ಪೊನ್ನ ಬೀರಸಂ ||
ಕಲೆಯ ತೊಳಪ್ಪ ಕನ್ನಡಿಯ ಚೆನ್ನಡಿಯಡ್ಡಣವೆಡ್ಡವಾಗೆ ಮೂ |
ದಲಿಸಿ ಪೊಡರ್ಪು ಪೆರ್ಚೆ ಕೆಲರುರ್ಕಡಿಗಳ್ ತಱಿಸಂದು ಕಾದಿದರ್ ||

ಕಡುಗದ ಪೊಯ್ಲಿಂದಂ ಕಾ |
ಲಡಿಗಳ್ ಕಡಿಯಾಗೆ ನೀಡಿದುಪ್ಪರವೊಯ್ಲಿಂ ||
ಪೊಡವಿಗೆ ಬೀೞ್ತರೆ ತಲೆ [5]ಸೊ |
ರ್ಕಡಗದೆ ಕೆಲರಿಱಿದು ಬೀರಸಿರಿಯೊಳ್ ನೆರೆದರ್ ||೨೭೩||

ವ|| ಅಂತು ಪೂಣ್ದು ನುಡಿದು ಪೆಱದೆಗೆಯದೆ ಪೊಕ್ಕು ಬೆರಸಿ
[6]ಸಣ್ಣನಾವ ಪೇರಱುಕೆಯ ಪರಿಗೆಕಾಱರಂ ಕಂಡು ||೨೭೪||

ಬಿಱುವರಿಯ ಬೇಗದಿಂದಂ |
ಕುಱುಪಿನ ಪಟಯಿಗೆಗಳೊಲೆಯೆ ಪೆರ್ಗಡಲೆಡೆಯೊಳ್ ||

---

1. ನುಣಿಯದೆಕಿಳ್ಕೃದಿ ವಿಂದು. ಗ|| ಖ|| 2. ಪೊಡೆವೊಯ್ಯುತೊ. ಖ|| 3. ದ. ಖ||
4. ಗೋಳಿಯ. ಖ|| 5. ಪೊ| ಕ್ಕಡೆಗೆ. ಖ|| 6. ಸಣ್ಣ ಸುಣ್ಣವಾದ. ಖ||

ನೆಱೆ ನಾವೆ ತಾಗುವಂದದೆ |
ತೆಱಪಿಲ್ಲದೆ [1]ತೇರ್ಗಳೊಡ್ಡು ತಾಗಿದುವಾಗಳ್ ||೨೭೫||

ತೇರೊಳಗಿರ್ದ ನಾಡೆಱೆಯರೆಚ್ಚರಲಂಬಿನ ಸೋನೆ ಸುತ್ತಲುಂ |
ಭೋರೆನು[2]ತೊರ್ಮೆ ಸೈಗಱೆಯೆ ತೊಟ್ಟನೆ ಪರ್ವಿದ ಮರ್ವಿನಿಂದವಾ ||
ತಾರಗೆವಟ್ಟೆಯಂ ದೆಸೆಗಳಂ ನೆಲನಂ ಕಡಲಂ ಬನಂಗಳಂ |
ಕಾರಿರುಳೈದೆ ನುಂಗಿದವೊಲಾದುದು ಕಾಳೆಗಮೇನಳುಂಬಮೋ! ||

[3]ತೇರೊಳ್ ಪೂಡಿದ ತೇಜಿಗಳ್ ಸರಲ ಕೂರ್ಪಿಂಗಳ್ಕಿ ಪಿಮ್ಮೆಟ್ಟಿ ಕೆ |
ನ್ನೀರೇಱುಂದೊಗೆದೆಚ್ಚು ಪಾಯೆ ಪೊಡೆವಾತಂ ಜೋಲ್ದು [ಕೈಗುಂದೆ ಕಂ ||
ಡಾರುತ್ತುಂ ಮುಳಿದೊತ್ತಿ ನೂಂಕಿ ಕಣೆಯಂ ಬಿಲ್ಲಂ ಬಿಸುಟ್ಟೆಕ್ಕೆಯಿಂ |
ಕೂರಾಳ್ಗಳ್ ತಲೆ [4]ಯೊತ್ತಿ ಕಟ್ಟೆದಲಗಿಂದಂ ಕುತ್ತಿ ವೈಯಿಕ್ಕಿದರ್ ||

ತೇರ್ಗಳ ಗೊಂದಣಂ ಮುಱಿದು ಮೆಟ್ಟಿದ ಕೊಂಬುಡಿದಂತೆ ಬೇಗದಿಂ |
ನೆರ್ಗನೆ ಬಿದ್ದು ನುಚ್ಚುನುಱಿಯಾಗೆ ಕನಲ್ದಳವಿಂದೆ ವಿಾಱಿ ಕೆ ||
ನ್ನೀರ್ಗಳ ಕಾಪ್ಪೊನಲ್ ಮಸಗಿ ಕೂಡೆ ಪೆಣಂಗಳನೆತ್ತಿ ಗುಂಪಿನಿಂ |
ಭೋರ್ಗರೆದೆತ್ತಲುಂ ಪರಿಯೆ ಗೋಡಯಿಲರ್ ಕಡುಕೆಯ್ದು ಕಾದಿದರ್ ||

ಮುಳಿಸಿಂದಂ ಕಿಟ್ಟು ಬಾಳಂ ಜಡಿದಳವಿಯನಾರಯ್ದು ಝಾರೇ |
ಜಝಾರೇ! | ಹಳುರೇ! ಹೋಹೋ! ಮಝಾ! ಎಂಬುಲಿ ನೆಗೆವಿನೆಗಂ
ಬಿಟ್ಟು ವಾಱಾಂತ ಮೇಲಾ || ಳ್ಗಳನಾಗಳ್ ತಳ್ತು ಪೊಯ್ದಾರ್ದಿಟಿಪಿ
ಕುದುರೆಯಂ ಕೊಂಡು ತಮ್ಮೊಡ್ಡಿನೊಳ್ ಕ | ಣ್ಗೊಳಿಪನ್ನಂ ಪೊಕ್ಕು
ಗೆಲ್ಲಂಬಡೆದರದಟನಿಂ ರಾಯರಾವೃತ್ತರಾಗಳ್ ||೨೭೯||

ಇಕ್ಕಿದ ಸೀಸಕಂ ಪಱಿದು ನೆತ್ತಿ ಸಿಡಿಲ್ವೊಡೆದೊಂದೆ ಗಾಯದಿಂ |
ಚಕ್ಕನೆ ಭೋಂಕನೆದ್ದು ಮಿಗೆ ಬೆನ್ನೊಳಮರ್ಚಿದ ಪೊನ್ನ ಪಲ್ಲಣಂ ||

---

1. ತೇರ್ಗಳುಲಿದು ತಾಗಿದುವಾಳ್. ಖ|| 2. ತೊರ್ಮೆಯುಂ ತೊಟ್ಟನೆ. ಖ||
3. ತೇರಂ ಖ|| 3. ವತ್ತಿ. ಖ||

ಪಕ್ಕರೆ ಕೇಶಜಿವಾರು ಕಟಿದಿರ್ಕಡಿಯಾದುವು ಬಾಳ ಬಾಯೊಳಿಂ |
ತಕ್ಕುಮೆ ತೋಱರತಕ್ಕಿದೆನೆ ಗೋಜಯಿಲರ್ ಕೆಲರಲ್ಲಿ ಕಾದಿದರ್ ||೨೮೦||

ತೊಟ್ಟನೆ ಪೊಂದಿದ ಕುದುರೆಯ |
ತಟ್ಟಂ ಕಂಡಣೆದು ನೂಂಕಿ ಬಲ್ಮಾವಂತರ್ ||
ಬಿಟ್ಟಕ್ಕಿದರಾನೆಗಳಂ |
ಬೆಟ್ಟುಗಳೊವರ್ೊಡಲೆ ಮುಸಗಿ ಕವಿದವೊಲೆತ್ತಂ ||೨೮೧||

ಕೋಲ್ಗಾರೊಳ್ ಸುರಿವಾಲಿವ |
ರಲ್ಗಳವೊಲ್ ನೆತ್ತಿಯೆಡೆಯ ಮುತ್ತುಗಳೆತ್ತಂ ||
ಗಲ್ಗಲನೆ ಸುರಿಯೆ ಜೋಱದರ್ |
ಬಲ್ಗಣೆಯಿಂದೆಚ್ಚರದಟಸಿಂದಾನೆಗಳಂ ||೨೮೨||

ಜ್ವಾಲದೆ ತನ್ನಾನೆಯಿನಾ |
ವಾಱಾನೆಯ ಕುಂಬತಳಕೆ ಪಾಯ್ದುಳವಿಂ ಕೈ||
ದೋಱು ಮಱುವಾನಿಸಂ ಮೆ |
ಯ್ಯೇಱಂ ಕಂಡಗಿದು ಜೋಲೆ ಕೊಂದನದೊರ್ವಂ ||೨೮೪||

ಅಣೆದುದು ಕೊತ್ತಿನೂಂಕಿದುದು ಪೊಕ್ಕೊಡನಿಕ್ಕಿದುದೇಱ ಬಾಯ್ಗಳಿಂ |
ನೆಣನುಗೆ ನೆತ್ತರುಚ್ಚಳಿಸೆ ಜಾದಿನ ಬೆಟ್ಟು ಮಗುಳ್ಚುವಂತೆ ಭಂಡ ||
ಣದೆಡೆಯೊಳ್ ಪೊಣರ್ವ ಪಲವಾನೆಗಳಂ ಕೆಡಪಿತ್ತದೊಂದು ಮ |
ನ್ನಣೆವಡೆದಾನೆ ಬೊಬ್ಬಿಱಿಯೆ ತನ್ನಯ ಮೇಗಣ ಜೋದನಾರ್ಪಿನಿಂ ||

ತಲೆಗಳ ಬಟ್ಟಲಿಂ ಮೊಗೆದು ನೆತ್ತರನಾಗಳೆ ಈಂಟಿಯೊಂಟೆ ಮೆ |
ಯ್ಗಲಿಗಳ ಕಂಡದಿಂಡೆಗಳ ಬಕ್ಕಣಮಂ ತವೆ ಮೆಲ್ದು ಮೆಲ್ದು ಮೆ ||
ಯ್ಮೆಲೆದುಡೆ ಜೋಲ್ದು ನಾಣಟಿದು ಕಣ್ ನಸುಮುಚ್ಚಿರೆ ತೇಗಿತೇಗಿಮಾ|
ರ್ಮಲೆದಿದಿರಾಗಿ ಕೈಪಱಿಯೊಳಾಡುವ ರಕ್ಕಸಿಯರ್ಕಳೊಪ್ಪಿದರ್ ||

ವ|| ಅಂತು ನೋಟ್ಪರ ಕಣ್ಗೆ ಕೊಕ್ಕರಿಕೆಯಾದಾನೆಗಾಳಿಗದೊಳ್ ನಿಲ್ಲದೆ ತಲ್ಲಣದಿಂ ಪೆಱದೆಗೆವ ಬಿದಿವೆಡಂಗನೆಂಬ ಬಿಂಜವಾಣಿಕನೆಂಬ, ಹರಿರಾಯನೆಂಬ, ತೋಽರಹತ್ತನೆಂಬ, ಚೌವಟಮಲ್ಲನೆಂಬ, ಮುಱುವ ರಕ್ಕಸನೆಂಬ, ರಾಯದಟುಸೂಱುಕಾಱನೆಂಬ, ತನ್ನೊಡ್ಡಿನ ಪೇರಾನೆಗಳಂ ಕಂಡು ಕಡುಮುಳಿದು ಬಿಸುಗಣ್ಣೊಳೊಗೆದ ಬೀರಂ ಕೂರಾಳ್ಗಳಂ ಕೂಡಿಕೊಂಡಲಗನುಗಿದು ಗಿಱ್ರನೈತಂದಾನನೆವಿಲ್ಲ ಬಲ್ಲಹನ ಪಾಡಿಯಂ ಕೂಡೆ ಪಾಡಱಯೆ ನೀಡುಂ ಮುಱುವಾಗಳ್ ||೨೮೬||

ಕಟ್ಟಿದಿರೊಳಾಂತರಂ ನೆಱೆ |
ನಿಟ್ಟಿಸಿ ನನೆವಿಲ್ಲ ಬಲ್ಲಹಂ ಮಾಱಣೆಯಂ ||
ನೆಟ್ಟನೆ ತೋಽಳ್ವಲದಿಂದೆ |
ಬ್ಬಟ್ಟಿದನವನಿದಿರೊಳಾವನುಂ ನಿಂದಪನೇ ? ||೨೮೭||

ವ|| ಅಂತು ಕೈಕೊಳ್ಳದೆ ಬೆಂಬತ್ತಿ ತೇಽನತೇಽನಂ ಮಸಗಿ ಸಂದಣಿಸಿ ಬರ್ಪ ಸೊರ್ಕಾನೆಗಳ ಕಾಲ್ಪೊಱುಗೆ ನೆಲನೊಂದೆಸೆಗೊಲೆದು ಜಾಱುಂಗಲ್ಲಂತೆ ತೋಱುಯುಂ, ಮುಗಿಲಂ ಮುಂಡಾಡುವಂತಿರುದ್ದವಾದ ಪಲತೆಱದ ಕುಱುಪಿನ ಮಿಳರ್ವ ಪಟಯಿಗೆಗಳ ಗಾಳಿ ಗಾಳಿವಟ್ಟೆಯೊಳ್ ನಡೆವ ಪಗಲೊಡೆಯನ ಕುದುರೆಯ ಸೇದೆಯಂ ಪಿಂಗಿಸೆಯುಂ, ತಟ್ಟೊಡೆಯದೆ ತೆರಳ್ವ ತೇಽಜಿಗಳ ಕಾಲ ದೂಳಿ ನೆಗೆದು ಕೊಳುಗುಳದೊಳ್ ಪಸರಿಸಿ ಬೀರರನರಸುವಚ್ಚರಸಿಯರಂ ಪೊಲಂಬುಗಿಡಿಸೆಯುಂ, ಕಾಲಾಳ್ಗಳಬ್ಬರಕ್ಕೆ ತಾಯ್ಮಟಲ್ದೋಽಱ ಮೇರೆದಪ್ಪಿದ ಮುನ್ನೀರೊಳ್ ಕಡಲೊಡೆಯನಟ್ಟುಡಂಗೆಯುಂ, ಜವನ ಮಂತಣಸೂಲದಂತೆ ನೆಗೆದ ಕೊಂತದ ಕೂರ್ಮೊನೆಯ ಕೋಽಲಾಟಕ್ಕೆ ತಾರಗೆವಟ್ಟೆಯೊಳ್ ನಡೆವ ಬಿಜ್ಜೋದರಿಯರ್ ಪುಗಲಱಯದೆ ಸಿಡಿಮಿಡಿಗೊಳುತ್ತಿರೆಯುಂ, ತೆಱಪುಗುಡದೆ ಸೂಪ್ಯಸುವ ನಿಸ್ಸಾಳದ ಬಲ್ಸರಕೆ ದೆಸೆವೆಟ್ಟುಗಳ್ ನಿಬ್ಬರಂ ಬಿರಿಯೆಯುಂ, ಬೇಗದಿಂ ನಡೆದೆತ್ತಿ ಬಂದು ಮಂಜುವೆಟ್ಟಮಂ ಮೂವಳಸಾಗಿ ಮುತ್ತಿದಾಗಳ್ ||೨೮೮||

ನನೆವಿಲ್ಲಾತನ ಮುಕ್ಕ |
ಣ್ಣನ ತಕ್ಕಂ ನೋಡವೇೞ್ಕುಮೆಂದೊಲವಿಂದಂ ||
ತನತನಗೆ ಬಂದು ಮುಗಿಲೊ |
ಡ್ಡಿನ ಕೆಲದೊಳ್ ಸಗ್ಗದವ*ರ್ಗಳೆಲ್ಲರ್ ನಿಂದರ್ ||೨೮೯||

ಕೋವಣಮುಂ ಗುಂಡಿಗೆಯುಂ |
ನೇವರಿಸಿದ ಬೂದಿಯುಂ ಜಲಕ್ಕನೆ ಚೆಲ್ವಿಂ ||
ತೀವಿರೆ [1]ಬಿಸುಗಣ್ಗೊರವಂ |
ಕಾವನ ತೋಳ್ವಲಮನಱುವೆನೆಂದೇೞ್ತಂದಂ ||೨೯೦||

[2]ಮಿಸುಗುವ ನಾಲ್ಕುಂ ಕೋಡಿಂ |
ದೆಸೆವಾನೆಯನೇಱಿ ಪಿಡಿದ ಬೆಳ್ಗೊಡೆ ಸಸಿಯುಂ ||
ಮಸುಳಿಸೆ ಬಂದಿರ್ದಂ ಪಾ |
ಡಿಸುತುಂ ಪೆಸ*ರ್ವಡೆದ ಗಾಣರಿಂ ಪಲಗಣ್ಣಂ ||೨೯೧||

ತೊಳಗುವ ಸಂಕುಂ ಪಾಱುಂ |
ಬಳೆ ನೇರ್ಪಡೆ ಪರ್ದನೇಱಿ ಬಂದೊಲವಿಂ ಪ||
ಜ್ಜಳಿಪ ಮುಗಿಲೆಡೆಯೊಳಿರ್ದಂ |
ತಳತಳಿಸುವ ತೊಡವನಾಂತು ಸಿರಿವೆಣ್ಣರಸಂ ||೨೯೨||

ಕರಮೊಪ್ಪುವೆಣ್ಟು ತೋಳುಂ |
ಬಿರಿವೂವಂ ನಗುವ ನಾಲ್ಕು ಮೊಗಮುಂ ಚೆಲ್ವಿಂ |
ಪೊರೆಯೇಱಿರೆ ಬಂದಿರ್ದಂ |
ಸರಸತಿವರನಂಚೆಯೇಱಿ ನಲವಿಂ ಬೊಮ್ಮಂ ||೨೯೩||

ವ|| ಅನ್ನೆಗಮಿತ್ತಲ್ ||೨೯೪||

1. ತಿಸುರುಣಿಗೊರವಂ. ಕ|| 2. ಎಸಗುವ ಗ|| 3. ಸಂಕಂ. ಗ||

ಕೆಟ್ಟೋಡಿ ಪಾಡಿಯೆಲ್ಲಂ |
[3]ಪಿಟ್ಟಂ ಪಿಟ್ಟಾಗಿ ಪೋದೊಡಂ ಬಗೆಯದೆ ಕ ||
ಣ್ಗೆಟ್ಟಳವೆಸಿಸಿದ ಬೆಳ್ಳಿಯ |
ಬೆಟ್ಟನೆ ಪೆಱದೆಗೆಯದೀಸನೊರ್ವನೆ ನಿಂದಂ ||೨೯೫||

ವ|| ಅದಂ ಕಂಡು ಕಂಗನೆ ಕನಲ್ದು ಮುಟ್ಟಿವಂದು ಮೂದಲಿಸಿ ನನೆವಿಲ್ಲ ಬಲ್ಲಹನಿಂತೆಂದಂ :— ||೨೯೬||

ಕಡುಪಿಂ ಪೂವಿನ ಕೋಲ್ಗಳ್ |
ಗಡಣಿಸಿ ಕವಿತಂದು ನಾಂಟುವಾಗಳ್ ನಿನ್ನೀ ||
ಜಡೆಯುಂ ತೊವಲುಂ ಪಾವಿನ |
ತೊಡವುಂ ಲಾಗುಳಮುಮಡ್ಡಮೇಂ ಬಂದಪುವೇ? ||೧೯೭||

ನಿನ್ನಗ್ಗದ ಪಡೆಯೆಲ್ಲಮು |
ದೆನ್ನಯ ಪೂಗಣೆಯ [1]ಕೋಲಿಗೆ ಗುಱಿಯಾದುದು ಕೇಳ್ ||
ಇನ್ನಾದೊಡಮೆಳವೆಱೆಯಂ |
[2]ಕೆನ್ನಂ ಪಿಡಿದಿರದೆ ಬಿಟ್ಟು ಬಾಳ್ ಬಡಗೊರವಾ ||೨೯೮||

ಎಡಗೈಯೊಳೊತ್ತಿ ಬಿಲ್ಲಂ |
ಪಿಡಿದೊಯ್ಯನೆ ತೀಡಿ ಗೊಣೆಯುಮಂ ಕಡುಪಿಂ ಜೇ ||
ವೊಡವಾಗಳ್ ನೆಲನನಿತುಂ |
ನಡುಗುವುದೆಲ*ವೊರ್ಯ್ನನಾಂತ ತಾವರೆಯೆಲೆವೋಲ್ ||೨೯೯

ಬಿರಯಿಗಳಂಜೆ ಕೂಡದರ ಕಲ್ಲೆದೆರ್* ಪವ್ವನೆ ಸೀಱ ಬಿರ್ಚಿದೋ |
ಪರ ಕಡುಸೊರ್ಕು ಮೆಯ್ದ್ದಿಗೆಯೆ ಪಿಂಗಿದ ಸೀಱರ ಬಲ್ಪು ಪಾಱೆ ಪಾ ||
ದರಿಗರ ನಾಣ್ಗಳುರ್ಕುಗಿಡೆ ಬಲ್ಮೊಳಿಸಿಂದಮಗಲ್ಕೆವೆತ್ತ ನ |
ಲ್ಲರ ಬಗೆ ಬಳ್ಕೆ ಜೇವೊಡೆಯ ಬಲ್ಲುಲಿ ನೀಳ್ದುದು ಕರ್ವುವಿಲ್ಲನಾ ||೩೦೦||

---

1. ದಿಟ್ಟಂ. ಗ|| ·1 ಕೊಳ್ಗೆ. ಕ|| 2. ಗಿನ್ನಂದಿಡದಿರದೆ. ಗ||

ಬಿಸುಗದಿರನ ಕಡುಗಾಯ್ಪಂ |
ಮಸುಳಿಸಿದುವು ತುಱುಗಿ ನೆಗೆದು ನಾಲ್ಕುಂ ದೆಸೆಯಂ ||
ಮುಸುಕಿದುವು ಮುಳಿದರಂ ಜಂ |
ಕಿಸಿದುವು ಬಿಡದಾರ್ದು ಕಾವನೆಚ್ಚಲ*ರ್ಗಣೆಗಳ್ ||೩೦೧||

ಚಲದಿಂ ಕಾವಂ ತೆಗೆದೆ |
ಚ್ಚಲರಂಬೆಡೆಗೊಂಡು ತೊಱೆಗಳುಂ ಬೆಟ್ಟುಗಳುಂ ||
ಪೊಲನುಂ ಬಾನುಂ ದೆಸೆಯುಂ |
ಜಲಕ್ಕನಲರಿಂದೆ ಸಮೆದವೋಲಾಯ್ತೆತ್ತಂ ||೩೦೨||

ಇವು ಮುನ್ನಾರಾರ ಬಲ್ಪಂ ನೆಲೆಗಿಡಿಸವಿವಾರಾರ ತಕ್ಕಂ ನೆಲಕ್ಕಿ |
ಕ್ಕವಿವಾರಾರುರ್ಕನೊತ್ತಂ[1]ಬರಿದು ಕಿಡಿಸವಾರಾರ ಕಾಯ್ಪೆಲ್ಲಮಂ ನೂಂ ||
ಕವಿವಾರಾರೇಳ್ಗೆಯಂ ಕುಂದಿಸಿ ಕಳೆಯವಿವಾರಾರ ಕಲ್ಮೆಯ್ಗ[2]ಳೊಳ್ನಾಂ|
ಟವೆನುತ್ತಂಕೆಲ್ಲರುಂ ಬಾಯ್ವಿಡೆ ಗಡಣದೆ ಪೂಗೋಲ್ಗಳೈತಂದುವಾಗಳ್||

ಅದಟರ್ ಬಾಯ್ವಿಡೆ ಬಲ್ಲಿದರ್ ಪೆಳರೆ ಗಂಡರ್ ಜಾಱೆ ಕೈಕೊಳ್ಳದ |
ಗ್ಗದ ಬೀರರ್ ತೆಗೆದೋಡೆ ತೋರಱುಕೆಯಾಳ್ಗ[3]ಳ್ ಬಳ್ಕಿಬೆಂಬೀಡೆ ಪೆ ||
ರ್ಚಿದ ಕಂಪಿಂಗೆಳಸಿರ್ಪ ತುಂಬಿ ಕರಿಕಂತಾಗಿರ್ಪಿನಂಬಂದುವೋ |
ರ್ಮೊದಲೊಳ್ ಮಾವಿನ ಬಳ್ಳಿಮಲ್ಲಿಗೆಯ ಕೋಲೆತ್ತೆತ್ತಲುಂಕಾವನಾ ||

ಕಣೆಕಣೆಯನುಗು*ಳ್ವ ತೆಱದಿಂ |
ಕಣೆಕಣೆಯಂ ಕಱೆವ ತೆಱದಿನೆಂಟುಂ ದೆಸೆಯೊಳ್ ||
ಕಣೆಕಣೆಯ [4]ನೀಂಬ ತೆಱದಿಂ |
ಪಣಿದರನಗಿದಳರೆ ಕವಿದು[5]ವಾಗಳ್ ಕಣೆಗಳ್ ||೩೦೪||

ಮುಗಿಲೆಡೆಯಲ್ಲಿ ಬಂದು ಸುಟಿದಾಡುವ ಪೆಣ್ದೆರ ಕಣ್ಣ ಬೆಳ್ಪೊ ತಾ |
ರಗೆಗಳ ನೀಳ್ದ ನುಣ್ಬೆಳಗೊ ಮಿಂಚಿನ ಗೊಂಚಲೊ [6]ಹಾದಿಗೆಟ್ಟತೊ ||

---

1. ಬಡೆಮು. ಕ|| 2. ಕಾಲ್ಮೆಯ್ಗಳೊಳ್. ಗ|| 3. ಕರಿ ಕಾನಾ. ಕ||
4. ಸೀವ. ಗ|| 5. ಪೆಳರೆಕವಿದುವು. ಕ|| 6. ದಾರಿ. ಗ||

ಟ್ಟಗೆ [1]ನೆಗೆತರ್ಪ ನುಣ್ಗದಿರೊ ಪೇೞನೆ ನೋೞ್ಪರ ಕಣ್ಗೆ ಸುತ್ತಲುಂ ।
ಸೊಗಯಿಸಿ ಮೇಲಿಮೇಲೆ ಕವಿತಂದುವು ಭೋಂಕನೆ ಪೂವಿನಂಬುಗಳ್ ॥

ಗಡಣದೆ ಮಾದೇವಿಯ ಬಗೆ ।
ಯೊಡೆಯನ ನೊಸಲೊಳ್ ಕದಂಪಿನೊಳ್ [2]ಕೈಮೊಗದೊಳ್ ॥
ತೊಡೆಯೆ [3]ಡೆಯೊಳ್ ತೋಳೆಡೆಯೊಳ್ ।
ಬಿಡೆ ನಟ್ಟುವು ಕಾವನಂಬುಗಳ್ ತಾವೈದುಂ ॥೧೦೭॥

ಕಟ್ಟಾಳ್ಗಳೆನಿಪ ರಕ್ಕಸ ।
ರೊಟ್ಟೞೆಗೆಟ್ಟಟಲೆ ಸಗ್ಗಿಗರ್ ನೆಲನನೊಡಂ ॥
ಬಟ್ಟರೆ ಕಾಳೆಗದೆಡೆಯೊಳ್ ।
ತೊಟ್ಟನೆ ಮಾದೇವಿಯರಸನರೆವೆಣ್ಣಾದಂ ॥೧೦೮॥

ಮೊರೆದಾಡುವ ಮುಱಿದುಂಬಿಯ ।
ನೆರವಿಗಳ್ಕೈತಂದು ಮುಸುಱಿ ಪೊಸಗಂಪನುಣಲು ।
ತ್ತಿರೆ ಕಾವನ ಮೇಲಂದ ।
ಚ್ಚರಸಿಯರಿಚ್ಚೆಯೊಳೆ ಮುಗುಳ ಮೞೆಯುಂ ಕಱಿದರ್ ॥೧೦೯॥

ವ॥ ಆದಂ ಕಂಡು ಕಡುಮುಳಿಸೆಂಬ ಕಿಚ್ಚಿನ ಕರ್ಜೊಗೆಯಂತೆ ಗುರ್ಬುವಡೆದು ನೊಸಲೊಳ್ ಗಂಟಿಕ್ಕಿದ ಪುರ್ಬುಗಳುಂ, [4]ಆ ಕಿಚ್ಚಿನ ನಾಲಗೆಯಂತೆ ಕೆಂಪಡರ್ದ ಕಣ್ಗಳುಂ, ಪೊಱಮಡುವ ಸಾಪದಕ್ಕರದ ಪೊಯ್ಲಿಂಗೆ ನಡುಗುವಂತೆ ಕೆತ್ತುವ ತುಟಿಯುಂ, ಪರ್ಬುವ ಕನಲ್ಕೆಯೆಂಬ ಬಳ್ಳಿ ಕೂರದಂಟಾದಂತೆ ಪಿಡಿದ ಲಾಗುಳಮುಂ ಅಂಜಿಕೆಯಂ ಪುಟ್ಟಿಸೆ ॥೧೧೦॥

ಎಱಗುವ ತುಂಬಿವಿಂಡಗಿಯೆ ಬಗ್ಗಿಪ ಕೋಗಿಲೆ ಕೊಂಬುಗೊಂಡುಬ ।
ಳ್ಕುಱೆ ಮುಳಿದಡ್ಡವಾಯ್ದು ಗಿಳಿ ಮಲ್ಲಱಿಗೊಂಡೊಳಸಾರೆ ಮಾವುಕ್ಕೈ ॥

---

1. ನಡೆತರ್ಪ. ಗ॥ 2. ಮುಂಮೊಗದೊಳ್ ಗ॥ 3. ತೋಳ್ತೊಡೆಯೊಳ್ತರದಿಂ ಬಿಡೆ ಗ॥ 4. ಕಾಳ್ಕಿಚ್ಚಿನ. ಗ॥

ಮಱಿಯೆ ತೆರಳ್ದು ¹ರೂವುಗಿಡೆ ತೆಂಬೆಲರಂಚೆಗಳೊಡ್ಡು ಪಾಱಿಬಾಂ |
ದೊಱೆದಲೆಯಂ ಕಸಲ್ದು ನಡೆತಂದು ಬಸಂತನ ಸೊರ್ಕು²ಸೋರ್ವಿನಂ||

ವ|| ಮುಂದೆ ನಿಂದು—ಪಿರಿಯರೆಂಬುದಂ ಬಗೆಯುದುರ್ಕಿಂದೆನ್ನೊಳ್ ಕಾದಿದೆ. ಅಂತದಱಿಂ ನಿನ್ನೋಳ್ಪಳಂ ಕೂಡದೆ ಪೆಱರಱಿಯದಂ ತೆಳ್ಳಿಯಾದೊಡಂ ನಾಂ ಕಾವನೆಂಬುದಂ ಮಱದಿರ್, ಎಂದು ಬೇಗದೆ ಪೂಗಣೆಯಂಗೆ ಸಾಪಮನಿತ್ತುದಂ ಬಸಂತನಿಂ ನೆಲೆವೀಡಿನೊಳಿರ್ದಿಚ್ಚೆಗಾರ್ತಿ ಕೇಳ್ದು ಮುಚ್ಚೆವೋಗಿ ಬೞಿಯಮೆಂತಾನುಮೆಚ್ಚತ್ತಿರಲೊಡನೆ||

ಪರಿಗಿಡೆ ಕಣ್ಣನೀರಱುತುದೆಕ್ಕಸರಂಗಳ ತೋರಮುತ್ತುಗಳ್ |
ಪುರಿದವೊಲಾದುವಿಟ್ಟ ಸಿರಿಕಂಡದ ಬೊಟ್ಟು ಕಱಂಗಿ ಕಣ್ಗೆ ಕ||
ತ್ತುರಿಯವೊಲೊಪ್ಪಿ ತೋಱಿದುದು ಸೂಡಿದ ಬಾಸಿಗವಾಗಳಂತೆ ದ |
ಳ್ಪುರಿ ತಗು*ಳ್ದಂದದಿಂ ಕರಿದುದಾಕೆಯ ಮೆಯ್ಬಿಸುಪೇನಳುಂಬವೋ ||

ನೋಡಿದ ಮಾಮರಂ ಕೊರಗಿ ಸೀಕರಿವೋದುದು ಪೊಕ್ಕ ಪೂಗೊಳಂ |
ಪಾಡೞಿದೈದೆ ಕಾಯ್ದು ಕುದಿಗೊಂಡುದು ನೀಳ್ದೊಗೆತರ್ಪ ಸುಯ್ಯೆಲ ||
ರ್ಗೂಡಿದ ಗಾಳಿ ಸೋಂಕಿದವರಂ ಸುಡುತಿರ್ದುದು ಪೊತ್ತುಪೂ ತಳಿರ್ |
ಬಾಡಿ ಕಱಂಗಿ ಚುಯ್ಯೆನುತುಮಿರ್ದುವು ನೀಱೆಯ ಮೆಯ್ಯ ಬೆಂಕೆಯಿಂ||

ವ|| ಮತ್ತಮೊರ್ವಳ್ ಮಿಸುಪೆಸಳ ಪಸರದಿನೆಸೆವ ಪೊಸಪಸೆಯೊಳ್ ಮೆಯ್ಯನೀಡಾಡಿ ಪೊಳೆವುವಡೆದ ಪಾಲ್ಗಡಲ ತೆರೆದುಱುಗಲೊಳ್ ಪವಡಿಸುವ ಸಿರಿಯಂ ಪೋಲ್ತಿರ್ಪಳ್; ಒಡನಾಡಿಗಳಡಿಗಡಿಗೆ ತಳಿವ ಪನ್ನೀರ ತುಂತುರ್ವನಿಗಳಿಂ ಪೊಸತಪ್ಪ ಕಾರ ಸಿರಿಯ ಪರಿಯಂ ಪಡೆದಂತಿರ್ಪಳ್; ಅಂದಂಬಡೆದ ಕೆಂದಳಿರ ಗೊಂದಣದೊಳೊಂದಿ ನಿಂದು ಸಂದಣಿಸಿ ನೆಗೆದ ಕೆಮ್ಮುಗಿಲ ನಡುವೆ ಪೊಳವೆಳವೆಱೆಯಂತಿರ್ಪಳ್; ನಳನಳಿಸಿ ಬೆಳೆದ ಬೆಳ್ದಾವರೆಯ ತೊಳಗುವೆಳ ³ದಾವರೆಯ ಬಳಗಮಂ

1. ಪೂಣ್ಕೆ. ಕ|| 2. ಪೋಪಿನಂ ಗ|| 3. ಗಾವಿನ ಗ||

ತಳೆದು ಪಾವಿನ ಪಚ್ಚದಿನಚ್ಚರಿವಡೆದ ಜೋಗಿಣಿಯಂತಿರ್ಪಳ್ ; ಮನ್ನ ಣೆವೆತ್ತ ಮೇಳದ [1]ಕೆಳದಿಯರ್ ಮಾಣದೆ ಮೇಲೆ ಮೇಲೆ ತಂದೊಟ್ಟಿದ ಸಿರಿಕಂಡದ ಕೊಟ್ಕಸದಿಂ ಪುದಿದು ಜಂತದಿಂ ಕಡೆದು ಕಂಡರಿಸಿದ ಪುತ್ತಟಿಯಂತಿರ್ಪಳ್ ; ತಡಿತಡಿಯ ತೆಂಗಿನೆಳನೀರ್ ಕೂಡೆ [2]ಕರೆಗ ಣ್ಮುವ ಕೊಳಂಗಳೊಳಪೊಕ್ಕು ತಾವರೆಯ ಪಚ್ಚಲೆಯಂ ಮೆಯ್ಯೊ ಳಾಂತು [3] ನುಣ್ಣಿತಪ್ಪೆಳವಿದಿರ ಬಣ್ಣಮಂ ತಳೆದ ನೀರ್ವೆಣ್ಣಂತಿರ್ಪಳ್; ಅಂತುಮಲ್ಲದೆಯುಂ ||೩೧೫||

ಕುಳಿರ್ವ ಕೊಳಂಗಳೊಳ್ ಮಟಲ ದಿಂಟೆಗಳೊಳ್ ಸಮೆದಿರ್ಪ ಬೆಟ್ಟನೊಳ್ | ಬೆಳೆದೆಳಮಾವಿನೊಳ್ ತಳಿರ ಕಾವಣದೊಳ್ ಪರಿತರ್ಪ ಕಾಲ್ಗಳೊಳ್ || ಬಳಸಿದ ಬಳ್ಳಿಮಲ್ಲಿಗೆಯ ಮಂಡವದೊಳ್ ಸುಟಿದಾಡಿ ಮತ್ತೆಯುಂ | ಕಳೆಯಲಿನಿತ್ತುಮಾಱಳವಳುರ್ಬಿದ ತನ್ನಯ ಮೆಯ್ಯ ಬೆಂಕೆಯುಂ ||೩೧೬||

ಕೆಂದಳಿರ ಪಟಿವ ಪಾಸಿನೊ |
ಳಂದಂಬಡೆದಿಚ್ಚೆಗಾರ್ತಿ ನನೆವಿಲ್ಲಂ ತಾ ||
ನೆಂದಿಂಗೆ ಬಂದು ಕೂಡುವ |
ನೆಂದಂತಡಿಗಡಿಗೆ ಗಿಳಿಗಳಂ ಬೆಸಗೊಳ್ವಳ್ ||೩೧೭||

ತನಿವಣ್ಣಂ ಲಂಚವೀವೆಂ ಪುರುಳಿ ನಿನಗೆ ಪೋಗೊಂಚಲಂ ಬೇಗ ದಿಂದಂ | ನಿನಗೀವೆಂ ತುಂಬಿ ಕೆಂದಾವರೆಯ [4]ಮಿಸುಪ ಮೆಲ್ಮೊಗ್ಗೆ ಯಂ ಮಾಣದೆಂದುಂ | ನಿನಗೀ[5]ವೇನಂಚೆ ಕಂಪಂ ನಿನಗೆ ಸಲಿಸುವೆಂ ಕೂಡೆ ತಣ್ಗಾಳಿಯೆನ್ನೋ | ಪನನಿಂದಾರಯ್ದು ತಂದೆನ್ನೊಡನಿರಿಸಿದೊ ಡೆಂದಾಕೆ ಮಾತಾಡುತಿರ್ಪಳ್ ||೩೧೮||

---

1. ಕನ್ನೆಯರ್. ಗ|| 2. ಕಡೆ. ಕ|| 3. ನುಣ್ಣನಪ್ಪೆ. ಕ|| 4. ಮಿಸು ಗುವೊಳ್ಗಿಡ್ಡೆಯಂ. ಗ|| 5. ವೇಂ ಪಂಸೆ. ಗ||

ವ|| ಅನ್ನೆಗಮಿತ್ತಲಾಬಾಂದೊಱದಲಿಯನ ಸಾಪಂದಳೆದು ಬಂದು ನೀನೀಪೂವಿನ ಪೊಟಲೊಳ್ ನನೆಯಂಬನೆಂಬರಸಾದೆ. ನಿನ್ನ ಸಾಪಂ ಎನ್ನ ಮಾತನೆಂದು ಕೇಳ್ದೈ ಅಂದೇ ತೀರ್ದುದು. ಈ ಬಾಡೆ ಮೊದಲಾದುದೆಲ್ಲಂ ನಿನ್ನ ಪಾಡಿ—ಎಂದಚ್ಚರಸಿ ಪೇೞ್ದು ತನ್ನ ನೆಲೆಗೆ ಪಾಱಿಪೋಗೆ ||೩೧೯||

ಗಿಳಿಯಂದಾಮಾತಂ ಕೇ |
ಳ್ದಿಳದಳಿರಂ ಗುಡಿಯನೆತ್ತಿ ಕೊಂಡೊಲವಿಂ ಕ ||
ಣ್ಗೊಳೆ ಪೋಗಿ ಕಂಪುವೊಟಲಂ |
ಘಟಲನೆ ಪೊಕ್ಕಱಿಪಿದುದು ಬಸಂತಂಗಾಗಳ್ ||೩೨೦||

ವ|| ಅಂತಱಿಪಲೊಡನೆ ಕೋಗಿಲೆ ಕೈವಂದ ಮಾವಂ ಸಾರ್ದಂತೆಯುಂ, ಬಿಸಿಲೊಳ್ ಬೇಗುದಿಗೊಂಡವಂ ತಣ್ಣೆಳಲಂ ಪೊಕ್ಕಂತೆಯುಂ, ಬಡವಂ ಕಸವರಮಂ ಕಂಡಂತೆಯುಂ, ನಲ್ಲಳ ನುಡಿಯಂ ಕಾದಲಂ ಕೇಳ್ದಂತೆಯುಂ, ನೀಱೆಯ ಕಾಲ್ವೊಯ್ಲಿನಸುಗೆ ತಳಿರ್ತಂತೆಯುಂ, ಪಿರಿದಪ್ಪ ಸಂತಸಮ ನೆಯ್ದಿ ಬಸಂತಂ ತಳಿರ್ವನೆಯೊಳ್ ನಲ್ಲನಂ ನೆನೆದು ದೂಱುಸುತಿರ್ಪಚ್ಚೆಗಾರ್ತಿಗಾತೆಱನೆಲ್ಲಮಂ ಬಿನ್ನಪಂಗೆಯ್ದು ನಿಸ್ಸಾಳಮಂ ಸೂಡ್ಯೈಸವೇಟಲೊಡನೆ ||೩೨೧||

ಪಡೆಯೆಲ್ಲಂ ನಡೆನೋಡಿ ಮೆಚ್ಚೆ ಬಿದಿಯುಂ ನಾಣೋಡೆ ಬೆಂಕೊಂಡವಂ | ಕಡಲೊಳ್ ಪಟ್ಟನನಿಕ್ಕಿ ಮೆಟ್ಟೆದದಟಂ ಮುಕ್ಕಣ್ಣನಂ ಗೆಲ್ದನೆ | ಮ್ಮೊಡೆಯಂ ಬಂದಪನೀಗಳಿಂತೆ ನಲವಿಂದಂ ಬಳ್ಳಿಮಾಡಂಗಳೊಳ್ | ಗುಡಿಯಂ ಬೇಗದೆ ಕಟ್ಟೆಮೆಂದು ಪಡೆವಳ್ಳರ್ ಸುತ್ತಲುಂ ಸಾಱಿದರ್ ||೩೨೨||

ಕಳಸಂ ಕನ್ನಡಿ ಗುಡಿ ಪ |
ಜ್ಜಳಿಸುವ ಮಾಂದಳಿರ ತೋರಣಂ ದೆಸೆದೆಸೆಯುಂ ||

ಬಳಸಿರೆ ಬಾಜಿಸ ಪಱೆ ಕ |
ಣ್ಗೊಳಿಸಿರೆ ಪೊಱಮಟ್ಟರೊಸಗೆಯಿಂ ಪೊಸವೆಂಡಿರ್ ||೩೨೩||

ವ|| ಅಂತು ಪೊಱಮಟ್ಟು ಸಿಂಗರಗಡಲ್ ಕರೆಗಣ್ಮಿದಂತೆ ಬರ್ಪ ಪೆಂಡಿರ ತಂಡಕ್ಕೆ ತಲೆಮುಡುಗೆಯಾಗಿ, ಬೆಳ್ಗೊಡೆಯ ಕುಂಚದ ಅಡಪದ ಡವಕೆಯ ಬಿಜ್ಜಣಿಗೆಯ ಕಜ್ಜಳದ ಕನ್ನಡಿಯ ಚೆನ್ನೆಯರ್ವೆರಸು, ಇಚ್ಚೆಗಾರ್ತಿ ನಡೆವಾಗಳ್ ||೩೨೪||

ಸುರಯಿಯ ಚೊಲ್ಲೆಯಮುಂ ಪೊಸ |
ಸುರಹೊನ್ನೆಯ ಮೊಗ್ಗೆಯೆಕ್ಕಸರಮುಂ ಪೊಂಬಾ ||
ದರಿಯ ಕಿಱುಮುಗುಳ ತೊಡರುಂ |
ಪರಿವಡೆದಿರೆ ಬಂದನುತ್ತಯಿಂದೆ ಬಸಂತಂ ||೩೨೫||

ನಡೆವರಸಂಚೆಯ ತಂಡ |
ಕ್ಕೆಡೆನೆಱೆಯದು ಪೊಡವಿ ಗಂಡುಗೋಗಿಲೆಯಣಿಗ ||
ಳ್ಗೆಡೆನೆಱೆಯದಿನಿತುಮಾಗಸ |
ಮೆಡೆನೆಱೆಯದು ಗಿಳಿಯ ದಟಕೆ ದೆಸೆಯೆನಿತನಿತುಂ ||೩೨೬||

ವ|| ಅಂತು ಬಂದು ಪಿರಿದಪ್ಪೊಸಗೆಯಿಂದಿಚ್ಚೆಗಾರ್ತಿ ಕಾವನ ನಿದಿರ್ಗೊಳ್ವಲ್ಲಿ ||೩೨೭||

ಅಡಿಯಂ ಬಲ್ವಿಡಿದುವು ನು |
ಣ್ಣೊಡೆಯಂ ಪಿಡಿಕಿಸಿದುವಡ*ರ್ದು ಕಾವನ ತೋಳಂ ||
ಬಿಡದಪ್ಪಿದುವಂದಾಕೆಯ |
ಕೊಡಕೆವರಂ ನಿಮಿ*ರ್ದು ಪೊಳೆವ ತುಱುಗೆಮೊಗಣ್ಗಳ್ ||೩೨೮||

ಬಿರಿದೊಳ್ದಾವರೆಗಂಪಂ |
ಕೊರಲುದ್ದಂ ಪೀರ್ವ ತುಂಬಿಯೆನೆ ನೀಱನ ಚೆ ||

ಲ್ಪೊರೆದ ಸವಿದುಟಿಯನೊಲವಿಂ |
ಬರೆ ಪೀರ್ದುವು ನೋಡುವಿಚ್ಚೆಗಾರ್ತಿಯ ಕಣ್ಗಳ್ ||೩೨೯||

ನಗೆಮೊಗದೊಳ್ ತೆಱಂಬೊಳೆದು ನುಣ್ದುಟಿಯೊಳ್ ಮೊಗಮಿಕ್ಕಿ ಗಲ್ಲದೊಳ್ | ಜಗು*ಬ್ದು ಕೊಡಂಕೆಯೊಳ್ ನುಸುಳ್ದು ಪೇರುರದೊಳ್ ಸುಟಿದಾಡಿ ತೋಳ್ಗಳೊಳ್ || ಸೊಗಯಿಸಿ ಸೊರ್ಕಿ ಪೊರ್ಕುಳೊಳಡಂಗಿ ತೊಳಪ್ಪುಡೆಯೊಳ್ ಸಡಿಲ್ದು ಕಾ | ಲುಗು*ರ್ಗಳೊಳ್ಪೆದೆ ಮಾರ್ಪೊಳೆದು ವಾಕೆಯ ಡಾಳಮನಾಂತ ದಿಟ್ಟಿಗಳ್ ||೩೩೦||

ನನೆಗಣೆಯನ ಮೆಯ್ವೆಳಗೆಂ |
ಬಿನಿಗೊಳದೊಳ್ ಮೊದಲೆ ಮಿಳಿ*ರ್ದು ನೆಗೆದಾಡಿದುವಂ ||
ದೆನಸುಂ ಕಡುನೀಱಿಯ ಚೆ |
ಲ್ವಿನೆ ತೊಳಗುವ ಕಣ್ಗಳೆಂಬ ಪೊಸಮೀಂಬೊಣ*ರ್ಗಳ್ ||

ಸವನಿಸೆ ಹಮ್ಮದಂ, ನಡುಪ ಕಾಲ್ ಬೆಮರಂ ಬಿಡುತಿರ್ಪ ಗಲ್ಲಮು |
ಣ್ಮುವ ನವಿರೆಚ್ಚುಪಾಯ್ವ ಕಡೆಗಣ್ಣೊಸರಾಱುವ ಬಾಯ್ ಜಗುಲ್ದುತೋ ||
ಱುವ ಪೊಱವಾಱೊಳುಚ್ಚಳಿಪ ತೆಳ್ಪದಮಿರ್ವರೊಳೊಪ್ಪೆ ನೋಡಿವರ್ |
ತವಕಿಪ ಕಣ್ಮಲರ್ ಸುಸಿಲನೊಪ್ಪಿಸೆ ಕಾವನುಮಿಚ್ಚೆಗಾರ್ತಿಯುಂ ||

ವ|| ಬಟಿಕ್ಕೆ ಬಸಂತಂ ಮುಂತಾಗಿ ಬಂದು ಕಾಣ್ಕೆಗೊಟ್ಟು ಕಂಡ ತನ್ನ ಪಡೆಯೆಲ್ಲಮನಳವಱಿದು ಮನ್ನಿಸಿ ನನೆವಿಲ್ಲಬಲ್ಲಹಂ ಕೈವಂದ ಮಾವೆಂಬಾನೆಯನಿಚ್ಚೆಗಾರ್ತಿವೆರಸೇಱಿ ನಡೆತಂದು ಕಂಪಿನ ಪೊೞಲಂ ಪೊಕ್ಕು ಬೀದಿಗೊಂಡು ಬರ್ಪಾಗಳ್ || ೩೩೩||

ನೆಗೆದ ನೆಲೆಮಾಡದೊಳ್ ಪೊಸ |
ದುಗುಲಮನೊಲವಿಂದೆ ಪೊದೆದು ನೋಡುವಳೋರ್ವಳ್ ||
ಸೊಗಯಿಸಿದಳ್ ಮಿಱುಗುವ ಬೆ |
ಳ್ಮುಗಿಲಂ ಮಱೆಗೊಂಡು ನಿಂದ ಬಿಜ್ಜೋದರಿವೋಲ್ ||೩೩೪||

ಮುಡಿ ಜಗುಡೆ ನೇವುರಂ ದನಿ |
ಗುಡೆ ಬಡನಡು ಬಳ್ಕೆ ಮೇಲುದೋಸರಿಸೆ ತೊಳ ||
ಪ್ಪುಡೆ [1]ಸಡಿಲೆ ಬಂದಳೊರ್ವಳ್ |
ನಡೆನೋಡಿದಳಾಗಳಂತೆ ನಾಣಟಿವಿನಗಂ ||೩೩೫||

ಮುತ್ತಿನ ಪಚ್ಚಮಂ ತುಡುವುದಂ [2]ಮಱೆದೊಪ್ಪಿರೆ ಮೇಳದಾಕೆಗಳ್ |
ಕತ್ತುರಿಬೊಟ್ಟನೆಂತಿಡುವೊಡಂ ನಿಲಲೊಲ್ಲದೆ ನಾರ್ದು ನಲ್ಮೆಯಿಂ ||
ದೊತ್ತೆಯನಿತ್ತನಂ ಬಿಸುಟು ಚೌಕಿಗೆಯಂ ಪೊಱಮಟ್ಟು ಗಾಡಿ ಬೆಂ |
ಬತ್ತಿರೆ ಬಂದಳೊರ್ವಳಿಮೆಯಿಕ್ಕದೆ ನೋಡಿದಳೊಲ್ದು ಕಾವನಂ||೩೩೬||

ಸೋರ್ಮುಡಿ ಬೆನ್ನನಪ್ಪಳಿಸೆ ಬಿಂಕದಿನಿಕ್ಕಿದ ರನ್ನದೈಸರಂ |
ಪೆರ್ಮೊಲೆಯಂ ಪಳಂಚೆ ನಗೆಗಣ್ ಮಱುವುಲ್ಲಿಯ ಚೆಲ್ಲಗಣ್ಗಳಿಂ ||
ನೂರ್ಮಡಿ ಚೆಲ್ವನಾನೆ ನೊಸಲೊಳ್ ಕುರುಳುಯ್ಯಲನಾಡೆ ಬೇಗದಿಂ |
ಕೂರ್ಮೆಯನಾಂತು ನೀಱೆ ನಡೆತಂದಲ*ರ್ವಿಲ್ಲನನೈದೆ ನೋಡಿದಳ್ ||

ವ|| ಮತ್ತಂ ||೩೩೭||

ಕುರುಳೋ ತುಂಬಿಯ ಬಂಬಲೋ ತೊಡೆಗಳೋ ಪೊಂಬಾಳೆಯೋ ಕಣ್ಗಳೋ | [3]ದೊರೆವೆತ್ತೊಪ್ಪುವ ನೈದಿಲೋ ಬೆರಲೊ ಕೂರ್ಪಾಗಿರ್ದ ಪೂಗೋಲ್ಗಳೋ || ಕೊರಲೋ ನುಣ್ಪಾಳವಟ್ಟ ಕೌಂಗೊ ಪೊಸತಾಗಿರ್ದಪ್ಪುವೆಂದೈದೆ ಮಿಂ | ಡರ ತಂಡಂ ಬಟಿಸಲ್ವಿನಂ ನಡೆದು ಬಂದಾಸೀಱನಂ ನೋಡಿದಳ್ ||೩೩೮||

ಇಕ್ಕಿದ ರನ್ನದೋಲೆ ಪೊಸಮುತ್ತಿನ ಮೂಗುತಿ ತೋಳ ಬಂದಿ ನೀ|
ಳ್ದಿಕ್ಕಸರಂ ತೊಳಪ್ಪ ಬೆರಲುಂಗುರಮಿಂಚರವಾವ ನೇವುರಂ ||
ಚೊಕ್ಕಳವಪ್ಪ ಚೆಲ್ವನೊಳಕೊಂಡಿರೆ ಬೆಳ್ಳಿಯ ಬಳ್ಳಿವಾಡಮಂ |
ತಕ್ಕಿನೊಳೇಱ ನೋಡಿದಳದೊರ್ವಳಗುರ್ವಿಪ ಕರ್ವುವಿಲ್ಲನಂ ||೩೪೦||

---

1. ಜಡಿಯೆ. ಗ|| 2. ಮರೆದಂತಿರೆ. ಖ|| 3. ನೆರೆದಂತೋ ಕ||

ವ|| ಅಂತು ನಡೆನೋಡುವ ನಗೆಮೊಗದ ಮುದ್ದುಮೊಗದ ನುಣ್ಮೊಗದ ತನ್ನೋಲಗದ ಪಲತೆಱದ ಪೆಂಡಿರ ಕಣ್ಗೆ ಗಾಡಿಯಂ ಬೀಱುತುಂ ಬಂದರಮನೆಯಂ ಪೊಕ್ಕು ಪರಿವಡೆದ ಪಿರಿಯ ಕರುವಾಡದ ಮುಂದಣ ಓಲಗಸಾಲೆಯೊಳ್ ಸಿಂಗರದ ಚೆನ್ನನಾಂತ ಪಟ್ಟವಣೆಯ ಮೇಲೆ ಇಚ್ಚೆಗಾರ್ತಿವೆರಸು ನನೆವಿಲ್ಲ ಬಲ್ಲಹಂ ಕುಳ್ಳಿರಲೊಡನೆ||೩೪೧||

ಸಿಗಳದ ನುಣ್ಚುರಂ ಸೆಗೆವಿನಂ ನುಡಿಗಳ್ ಕಿವಿಗಿಂಪನೀವಿನಂ |
ಮಗಮಗಿಸುತ್ತುಮಿರ್ಪ ನಱುಸುಯ್ಗಲ*ರ್ವಕ್ಕಿ ಜಿನುಂಗುತಿರ್ಪಿನಂ ||
ಬಗೆಗೊಳೆ ಬಂದು ನಿಂದು ನೆಱೆವಗ್ಗದ ನೀಱೆಯರೊಲ್ದು ಪರ್ವುವಾ |
ಪೊಗಱುಲಿ ಪೊಣ್ಮೆ ಬಿತ್ತರದೆ ಮುತ್ತಿನ ಸೇಸೆಯನಾಗಳಿಕ್ಕಿದರ್ ||೩೪೨||

ನೊಸಲಿಡೆಯಲ್ಲಿ ನೀಳ್ದ ಕುರುಳೋಳಿಗಳುಯ್ಯಲನಾಡೆ ಡಾಳಮಂ |
ಪಸರಿಪ ತೋರಮುತ್ತಿನ ಸರಂ ಮೊಲೆಯೊಳ್ ತಲೆಯೊತ್ತೆ ನಾಡೆಯುಂ||
ಮಿಸುಗುವ ಕಣ್ಣ ನುಣ್ಬೆಳಗು ಜೊನ್ನದೊಳೋರಗೆಯಾಗೆ ಸೊಂಪು ಸಂ|
ದಿಸೆ ಪೊಸರನ್ನದಾರತಿಯನೆತ್ತಿದರಗ್ಗದ ಗಾಡಿಕಾರ್ತಿಯರ್ ||೩೪೩||

(ಉತ್ಸಾಹ ರಗಳೆ)

ಬಿಳಿಯ ನನೆಯ ಕಣೆಗೆ ನಾಡೆ ಪಗೆವರೊಡಲ ಸುಗಿಯೆ ಕೂಡೆ |
ನೆಲನನೊಂದೆ ಕೊಡೆಯಿನಾಳ್ದು ಮಿಸುಪ ಜಸಮೆ ನಿಮಿರೆ ಕೇಳ್ದು ||
ಕುಳಿ*ರ್ವ ಪೂಗೊಳಂಗಳಲ್ಲಿ ತಳಿರ ಕಾವಣಂಗಳಲ್ಲಿ |
ಪಳಿಕುವೆಸದ ಬೆಟ್ಟದಲ್ಲಿ ಪರಿವ ತೊಱೆಯ ತಡಿಗಳಲ್ಲಿ ||

ತುಂಬಿವಿಂಡಿ[1]ನಂತೆ ಪಾಡಿ ಜಕ್ಕವಕ್ಕಿಯಂತೆ ಕೂಡಿ |
ದೆಸೆಯನಿಚ್ಚೆಯಿಂದೆ ನೋಡಿ ಸೊಗಯಿಪಂಚೆಯಂತಿರಾಡಿ ||
ಪೊಳೆವ ತಳಿರ ನನೆಯ ಮೊನೆಯ ತುಱುಗಿದಲರ ಬಳಸುವೆಲರ |
ಮಿಳಿ*ರ್ವ ಮಿಡಿಯ ಗಿಳಿಯ ನುಡಿಯ ಪರಿವ ಕಾಲ ಕರ್ವುಗೋಲ ||

---

1. ನೊಡನೆ. ಗ||

ಚೆಲ್ವನಾಂತು ತೋರ್ಪ ಬನದ ನಡುವೆ ತನ್ನದೊಂದು ಬಿನದ |
ಮಮರೆ ಮಿಱುಪ ಬಟ್ಟಮೊಲೆಯ ಸೊಬಗು ಜೂಡಿವಡೆದ ನೆಲೆಯ ||

ಚೆನ್ನೆಯರ್ಕಳೊಡನೆ ಕೂಡಿ ಮುಗುಳ ಸರಮನಡರೆ ಸೂಡಿ |
ನಲ್ಲರೊಡನೆ ಕೂರ್ಮೆಯಿಂದೆ ಕಾವನೊಡನೆ ಪೆರ್ಮೆಯಿಂದೆ ||
ಮಾವಿನಡಿಯೊಳಾಡುತುಂ ಪಾಡನೆಯ್ದೆ ಕೇಳುತುಂ |
ಪೊೞ್ತುನಿಂತು ಕಳೆಯುತುಂ ತೊಲಗದಿರ್ದರೆಸೆಯುತುಂ ||೩೪೪||

ವ|| ಇಂತು ಕಾವದೇವನುಂ ಬಸಂತನುಂ ರೂಢಿವೆತ್ತು ಗಾಡಿ
ಯಿಂದೊಪ್ಪಿದರ್ ||೩೪೫||

ಪುರುಳುಂ ಲಕ್ಕಣಮುಂ ಮೆ |
ಯ್ಸಿರಿಯುಂ ಮೆಯ್ವೆತ್ತು ಸೋಲಿಪುದಱಿಂದೊಲ್ದು ||
ಕ್ಕರಿಗರಿದನೋದಿ ಪೊಸತಾ |
ಗಿರೆ ಸೊಬಗಿನ ಸುಗ್ಗಿಯೆಂಬ ಪೆಸರಂ ಕೊಟ್ಟರ್ ||೩೪೬||

ಮತ್ತಂ ಸಕ್ಕದಮಱಿವರ್ |
ಬಿತ್ತರದಿಂ [1]ಮದನವಿಜಯಮೆಂದೊಲವೆ*ರ್ದೆಯುಂ ||
ಪತ್ತಿರೆ ಪೆಸರಿಟ್ಟರಿದ |
ಕ್ಕತ್ತೞ[2]ವೆನಿಪುದೆನೆ ಮಿಸುಪ ಪೆಸರೆಸೆವಿನೆಗಂ ||೩೪೭||

ದೋಸದ ಮಾತು ಪೊರ್ದದೆನೆ ಬಲ್ಲವರಗ್ಗದ ಕನ್ನಡಂಗಳಿಂ |
[3]ಬಾಸಣವಾಗೆ ಪೇೞ್ದನೊಲವಿಂ ನೆಱೆ ಕಬ್ಬಿಗರೊಪ್ಪೆ ನಾಡೆಯುಂ ||
[4]ಗೋಸಣೆ ಮಿಱುವನ್ನಮಿದು ರಾಯನ ನಾಲ್ಕೞೊಳಿರ್ಕೆ ನಿಚ್ಚಮುಂ |
ದೇಸೆಯ ಗೊತ್ತು ಜಾಣ್ನುಡಿಯ ತಾಯ್ವನೆ ನುಣ್ಬುಡುಕೇೞ್ಗೆಯಿಂ
[ಬಿನಂ ||೩೪೮||

---

1. ಸ್ಮರನಗೆಲ್ಲವೆಂ. ಗ|| 2. ವೆನಿಪ್ಪಾಕ. ಕ|| 3. ದೂಸರ. ಗ||
4. ಗೋಸದೆ. ಗ||

ಪದಪಿಂ ಪೊರ್ದಿದರಿಚ್ಚೆಯಿಗಾವ, ಪದಿನೆಂಟುಂ ದೋಸಮುಂ ಪೊರ್ದದಾ| ಡಿದ ಮಾತೆಲ್ಲರ ಬಾಡ್ಕೆಯಪ್ಪುಱವಿನೊಳ್ ಮೂಲೋಕಮಂ ಕಾಣ್ಬ, ಪು|| ಟ್ಟಿದಪೊಲ್ ಕಣ್ಗಮ*ರ್ದೊಪ್ಪಿ ತೋಱುವರುಹಂತಂ ನಲ್ಮೆಯಿಂ ಮಾಡ್ಕೆ ಬೇ| ಡಿಮುದಂ ತನ್ನಱವಟ್ಟೆಗರ್ಗೆ. ನಲನುಂ ಮುನ್ನೀರುಮಿರ್ಪನ್ನೆಗಂ ||೩೪೯||

ಗದ್ಯ|| ಇದು ಪಸುಳೆವಿಸಿಲ ಮುಸಕದಿನೆಸಳ್ಮಿಸುಪ ಪೊಸದಾವರೆಯ
ಪಸೆಯೊಳಸದಳಮೆಸೆವ ಸರಸತಿಯಡಿದಳಿರ್ಗೆ ತಲೆದುಡುಗೆಯೆನೆ
ಪೆಸರ್ವಡೆವ ಬಿಜ್ಜೆವಳದಿಂ ಸಮೆದ

## ಕಾವನ ಗೆಲ್ಲಂ

ನೆಱೆಯುತಿರ್ಪುದು.



# ಕಬ್ಬಿಗರಕಾವದ ಟಿಪ್ಪಣಿ.

## ಕಥಾಸಾರ.

---

ಕನ್ನಡನಾಡಿನಲ್ಲಿ (೧೯) ಪೂವಿನ ಪೊಳಲೆಂಬ (೨೭) ಒಂದು ಪಟ್ಟಣವಿದ್ದಿತು. ಅದನ್ನು ನನೆಯಂಬನೆಂಬ ಅರಸು ಆಳುತ್ತಿದ್ದನು (೪೫). ಆತನು ವಸಂತಋತುವಿನಲ್ಲಿ ಒಂದು ದಿವಸ ತನ್ನ ಸ್ನೇಹಿತನಾದ ನಗೆಗಾರನನ್ನು ಬರಿಸಿ (೭೨), ತಾನು ಆ ದಿನದ ಬೆಳಗಿನ ಜಾವದಲ್ಲಿ ಒಬ್ಬ ಸುಂದರಿಯನ್ನು ಕನಸಿನಲ್ಲಿ ಕಂಡುದಾಗಿ ಹೇಳಿದನು (೭೯). ಅದಕ್ಕೆ ಆ ನಗೆಗಾರನು—"ಈ ಕನಸು ನಿಶ್ಚಯ. ಶೀಘ್ರದಲ್ಲಿಯೇ ನಿನಗೆ ಒಂದು ಸ್ತ್ರೀರತ್ನವು ದೊರಕುವುದು." ಎಂದು ಹೇಳಿದನು (೮೧). ಆ ಮಾತಿಗೆ ಮೆಚ್ಚಿ ರಾಜನು ಅವನನ್ನು ಸನ್ಮಾನಿಸಿ, ಅವನೊಡನೆ ಉಪ್ಪರಿಗೆಗೆ ಹತ್ತಿ, ಅಲ್ಲಿ ಗೋಡೆಯಲ್ಲಿ ಚಿತ್ರಲಿಖಿತವಾದ ವನವನ್ನು ನೋಡುತ್ತಿದ್ದನು (೮೨). ಆಗ ನಗೆಗಾರನು—"ಈ ಬರೆದ ಬನವಿರಲಿ. ಈ ಪಕ್ಕದ ಹೂದೋಟವನ್ನು ನೋಡು," ಎಂದು ತೋರಿಸುತ್ತಿದ್ದನು (೮೫). ಅಷ್ಟರಲ್ಲಿಯೇ ಒಬ್ಬ ವನಪಾಲಕನು ಬಂದು, ಹಣ್ಣುಹಂಪಲುಗಳನ್ನು ಕಾಣಿಕೆಗೊಟ್ಟು (೮೮),—"ಮಹಾರಾಜನು ವನವನ್ನು ನೋಡಬೇಕು" ಎಂದು ಬಿನ್ನವಿಸಿದನು (೮೯). ಬಳಿಕ ರಾಜನು ಪರಿಜನದೊಡನೆ ಹೊರಟು, ವನಕ್ಕೆ ಬಂದು (೯೭), ಅದರ ಸೌಂದರ್ಯವನ್ನು ನೋಡುತ್ತಾ ಬರುವಲ್ಲಿ, ಒಂದು ಮಾವಿನ ಮರದ ಕೆಳಗೆ ವನಲಕ್ಷ್ಮಿಯಂತೆ ನಿಂತಿದ್ದ ಒಬ್ಬ ಸ್ತ್ರೀಯನ್ನು ಕಂಡನು (೧೧೨). ಕಂಡು, ಅಲ್ಲಿಗೆ ಹೋಗಿ,—"ನೀವು ಯಾರು ?" ಎಂದು ಕೇಳಿದನು. ಅದಕ್ಕೆ ಆ ಅಪ್ಸರಸ್ತ್ರೀಯು—ತಾನು ವನವಿಲೋಕನಾರ್ಥವಾಗಿ ಬಂದವಳೆಂದು ಹೇಳಿದಳು (೧೧೫). "ನೀವು ಇಂತಪ್ಪ ವನವನ್ನು ಎಲ್ಲಿಯಾದರೂ ಹಿಂದೆ ನೋಡಿದುದುಂಟೆ ?" ಎಂದು ಕೇಳಿದನು. ಅದಕ್ಕೆ ಅವಳು ಇಂತೆಂದಳು :—(೧೧೭).

ಕಂಪಿನ ಪೊಳಲೆಂಬ ಪಟ್ಟಣದಲ್ಲಿ (೧೧೮) ಕರ್ವುವಿಲ್ಲನೆಂಬ ದೊರೆಯಿದ್ದನು (೧೧೯). ಅವನಿಗೆ ಇಚ್ಚೆಗಾರ್ತಿಯೆಂಬ ಪತ್ನಿಯಿ

ದ್ದಳು (೧೭೦). ಅವರಿಬ್ಬರೂ ಸುಖದಿಂದಿರುತ್ತಿದ್ದರು. ಹೀಗಿರುವಲ್ಲಿ, ಒಂದು ದಿನ ರಾಜನು ಒಡ್ಡೋಲಗದಲ್ಲಿ ಕುಳಿತಿರುವಾಗ (೧೭೯), ಒಬ್ಬ ಪಡಿಯರತಿಯು ಜೊನ್ನವಕ್ಕಿಯೆಂಬ ದೂತನನ್ನು ಕರೆದು ಕೊಂಡು ಬಂದಳು. ಆ ದೂತನು ಪ್ರಭುವಿಗೆ ನಮಸ್ಕರಿಸಿ, ಚಂದ್ರಕಿರಣಗಳನ್ನು ಕಾಣಿಕೆಗೊಟ್ಟು (೧೪೩),—"ಸ್ವಾಮಿ! ಹಿಮವತ್ಪರ್ವತದಲ್ಲಿರುವ ಶಿವನೆಂಬ ಒಬ್ಬ ಜೋಗಿಯು (೧೪೫), ನೆನ್ನೆಯ ರಾತ್ರಿ ಯುದ್ಧಮಾಡಿ, ನಮ್ಮ ಚಂದ್ರನನ್ನು ಕೈಸೆರೆಹಿಡಿದುಕೊಂಡಿರುವನು (೧೪೯). ಇದಕ್ಕೆ ತಕ್ಕ ಪ್ರತೀಕಾರವು ಮಹಾಸ್ವಾಮಿಯವರಿಗೆ ವೇದ್ಯವಾಗಿದೆ." (೧೫೦) ಎಂದು ವಿಜ್ಞಾಪಿಸಿದನು. ಕೂಡಲೇ ರಾಜನು ಕೋಪಗೊಂಡು ಶಿವನ ಮೇಲೆ ಯುದ್ಧಕ್ಕೆ ಪ್ರಯಾಣೋನ್ಮುಖನಾದನು. ಅದನ್ನು ನೋಡಿ, ಪಕ್ಕದಲ್ಲಿರುವ ಬಸಂತನು (೧೫೬)—ರಾಯಭಾರಿಯನ್ನು ಕಳುಹಿಸಿ. ಆತನು ತರುವ ಸಮಾಚಾರವನ್ನು ತಿಳಿದು ಬಳಿಕ ಯುದ್ಧಕ್ಕೆ ಹೋಗುವುದು ಉಚಿತವೆಂದು ತಿಳಿಸಿದನು (೧೫೯).

ರಾಜನು ಅದಕ್ಕೆ ಒಪ್ಪಿ, ತೆಂಗಾಳಿಯನ್ನು ಕರೆದು,—"ನೀನು ಆ ಗೊರವನಲ್ಲಿಗೆ ಹೋಗಿ, ನಮ್ಮ ಚಂದ್ರನನ್ನು ಬಿಡಿಸಿಕೊಂಡುಬಾ" ಎಂದು ಹೇಳಿದನು. ಕೂಡಲೆ ತೆಂಗಾಳಿಯು ಹೊರಟು ಹಿಮವತ್ಪರ್ವತವನ್ನು ಸೇರಿ, ಸಮಯವರಿತು ಈಶ್ವರನ ಸಭೆಯನ್ನು ಪ್ರವೇಶಿಸಿ (೧೬೦), ನಮಸ್ಕರಿಸಿ—"ನಮ್ಮ ಮಹಾರಾಜನು ತಮ್ಮ ಪ್ರಖ್ಯಾತಿಯನ್ನು ಕೇಳಿ, ತಮ್ಮಲ್ಲಿ ಸ್ನೇಹವನ್ನು ಬಳೆಯಿಸಬೇಕೆಂಬ ಇಚ್ಛೆಯಿಂದ ನನ್ನನ್ನು ಕಳುಹಿಸಿರುವನು (೧೬೯). ಪರಾಕ್ರಮಾದಿಗುಣಗಳಲ್ಲಿ ನೀವಿಬ್ಬರೂ ಸಮಾನರು. ತಾವು ನಮ್ಮ ಮಹಾರಾಜನ ಮೈತ್ರಿಯನ್ನು ಅಂಗೀಕರಿಸಿ ಚಂದ್ರನನ್ನು ಕಳುಹಿಸಿಕೊಡಿ." ಎಂದು ವಿಜ್ಞಾಪಿಸಿದನು (೧೭೭). ಅದಕ್ಕೆ ಕುಪಿತನಾದ ಈಶ್ವರನು ನಸುನಕ್ಕು (೧೭೮), ಕಬ್ಬುವಿಲ್ಲನ ಪರಾಕ್ರಮನ್ನು ಹಾಸ್ಯಮಾಡಿ, (೧೮೨-೮೩)—"ಚಂದ್ರನನ್ನು ಬಿಡಿಸಿಕೊಳ್ಳುವ ಸಾಹಸವಿದ್ದರೆ ನಿಮ್ಮ ಮಹಾರಾಜನೇ ಬಿಡಿಸಿಕೊಳ್ಳಲಿ." (೧೮೪) ಎಂದು ಹೇಳಿದನು.

"ನಮ್ಮ ಮಹಾರಾಜನ ಪರಾಕ್ರಮವನ್ನು ತಾವಿನ್ನೂ ಕಂಡಿಲ್ಲ. ಸಹಸ್ರಾಕ್ಷ, ಬ್ರಹ್ಮ, ಇವರ ಪಾಡೇನಾಯಿತೋ ತಾವೇ ನೋಡಿಕೊಳ್ಳಿರಿ

(೧೮೭). ಬಿಟ್ಟು ಕಳುಹದಿದ್ದರೆ ಪುಷ್ಪಬಾಣದ ಪೆಟ್ಟನ್ನು ಇನ್ನೆಂಟು ದಿವಸಗಳಲ್ಲಿ ತಾವೇ ನೋಡುತ್ತೀರಿ.” ಎಂದು ಹೇಳಿ, ಅಲ್ಲಿಂದ ಹೊರಟು ಕರ್ಪುವಿಲ್ಲನಲ್ಲಿಗೆ ಬಂದು—“ಗೊರವನು ಚಂದ್ರನನ್ನು ಬಿಡನು; ಯುದ್ಧಕ್ಕೆ ನಿಂತಿರುವನು.” ಎಂದು ತಿಳಿಸಿದನು (೧೮೮). ಕರ್ಪುವಿಲ್ಲನು ಕೋಪಾವಿಷ್ಟನಾಗಿ—“ಓಹೊ! ಆ ಬಡಗೊರವನು ನನ್ನ ಬಾಣಗಳನ್ನು ಉಟ್ಟುಕೊಳ್ಳುವ ಹುಲಿದೊಗಲೆಂದು ನೆನೆದನೋ; ಇಲ್ಲವೇ ಒಟ್ಟಿಕೊಳ್ಳುವ ಬೂದಿಯೆಂದು ಬಗೆದನೋ! (೧೮೯). ಇದಕ್ಕೆ ತಕ್ಕುದನ್ನು ಈಗಲೇ ಮಾಡಿ, ಅವನನ್ನು ಅರೆವೆಣ್ಣಾಗಿ ಮಾಡಿ ಬಿಡುವೆನು.” (೧೯೫) ಎಂದು ಉರಿದೆದ್ದು, ಸನ್ನಾಹಭೇರಿಯನ್ನು ಹೊಡೆಯಿಸಿ, ಬಸಂತನಿಗೂ ಮೆಲ್ಲೆಲರಿಗೂ ಸಮಸ್ತ ಸೈನ್ಯವನ್ನು ಸಿದ್ಧಪಡಿಸುವಂತೆ ಆಜ್ಞಾಪಿಸಿದನು. ಕೂಡಲೇ ಸೈನ್ಯವು ಸಿದ್ಧವಾಯಿತು. ಆಗ ಕರ್ಪುವಿಲ್ಲನು ತನ್ನ ವಿದ್ಯಾಬಲದಿಂದ ಒಂದು ಮಾಯಾಸೈನ್ಯವನ್ನು ನಿರ್ಮಿಸಿ, ಅದನ್ನು ಮುಂದುಗಡೆಯಲ್ಲಿಯೂ, ತನ್ನ ನಿಜವಾದ ಸೈನ್ಯವನ್ನು ಅದರ ಹಿಂದೆಯೂ ಕಳುಹಿಸಿ, (೧೯೬) ಅವುಗಳ ಹಿಂದೆ ಶುಭಲಗ್ನದಲ್ಲಿ ಜೈತ್ರಯಾತ್ರೆ ಹೊರಟು, (೧೯೭) ಹೇರಡವಿಯನ್ನು ದಾಟಿ, (೨೧೯) ಮುಂದೆ ಸಿಕ್ಕಿದ ಪರ್ವತದಲ್ಲಿ ತಪಸ್ಸನ್ನು ಮಾಡುತ್ತಿದ್ದ ಸವಣನಿಗೆ ನಮಸ್ಕರಿಸಿ (೨೩೨), ಅಲ್ಲಿಂದ ಹೊರಟು ಮುಂದಿನ ವನವನ್ನು ದಾಟಿ (೨೩೪) ರನ್ನಗಲ್ಲೆಂಬ ಬೆಟ್ಟದ ತಪ್ಪಲಲ್ಲಿ ಬೀಡನ್ನು ಬಿಟ್ಟನು(೨೩೭).

ಈ ಸಮಾಚಾರವನ್ನು ಕೇಳಿ ಈಶ್ವರನು ವೀರಭದ್ರನನ್ನು ಕರೆಯಿಸಿ (೨೩೯) ಅವರ ಮೇಲೆ ಯುದ್ಧಕ್ಕೆ ಹೋಗುವಂತೆ ಆಜ್ಞಾಪಿಸುವಷ್ಟರಲ್ಲಿಯೆ; ಕಾವನ ಕುದುರೆಗಳು “ಹೊಲ”ದಲ್ಲಿದ್ದವರ ಮೇಲೆ ಬಿದ್ದುವೆಂದು ಒಂದು ಕೋಲಾಹಲಧ್ವನಿಯುಂಟಾಯಿತು (೨೪೭). ಆ ಗಲಭೆಯನ್ನು ಕೇಳಿ, ಈಶ್ವರನು ತಾನೂ ಒಂದು ಮಾಯಾ ಸೈನ್ಯವನ್ನು ನಿರ್ಮಿಸಿ (೨೪೯), ವೀರಭದ್ರಾದಿಗಳೊಡನೆ ಕಳುಹಿಸಿದನು (೨೫೦). ಈ ಮಾಯಾಸೈನ್ಯವು ಹಿಮವತ್ಪರ್ವತದಿಂದ ಹೊರಟು, ಯುದ್ಧರಂಗಕ್ಕೆ ಬಂದು ವ್ಯೂಹವನ್ನು ರಚಿಸಿ ನಿಂತುದು (೨೫೭). ಬಳಿಕ ಉಭಯಸೇನಾನಾಯಕರ ಅಪ್ಪಣೆಯ ಮೇರೆ (೨೬೪) ಎರಡು ಸೈನ್ಯಕ್ಕೂ ಘೋರವಾದ ಯುದ್ಧವು ನಡೆದು(೨೬೫), ಈಶ್ವರಸೇನೆಯು ಪೆಟ್ಟು ತಿಂದು ಹೋಯಿತು. ಅದನ್ನು ನೋಡಿ ತನ್ನ ಸೈನ್ಯದ ಮೇಲೆ ಕಾಣಿಸಿ

ಕೊಂಡ ವೀರಭದ್ರಾದಿಗಳನ್ನು ಕಾವನು ಬಡಿದಟ್ಟಿ ಓಡಿಸಿಕೊಂಡು ಹೋಗಿ, ಹಿಮವತ್ಪರ್ವತಕ್ಕೆ ಮುತ್ತಿಗೆ ಹಾಕಿದನು (೨೮೮). ತನ್ನ ಸೈನ್ಯವೆಲ್ಲಾ ನಷ್ಟವಾದರೂ ಲಕ್ಷ್ಯಮಾಡದೆ ಈಶ್ವರನು ಏಕಾಕಿಯಾಗಿ ಪ್ರತಿಭಟಿಸಿ ನಿಂತನು. (೨೯೫). ಆಗ ಈಶ್ವರನನ್ನು ನೋಡಿ ಕಾವನು "ಗೌರವ! ನಿನ್ನ ಸೈನ್ಯವೆಲ್ಲಾ ಹತವಾಯಿತು. ಇನ್ನಾದರೂ ಚಂದ್ರನನ್ನು ಬಿಟ್ಟು ಕಳುಹಿಸಿ ಬದುಕು!" (೨೯೮) ಎಂದು ಮೂದಲಿಸಿ ಬಾಣಪ್ರಯೋಗಮಾಡಿದನು. ಆ ಪೆಟ್ಟಿಗೆ ಈಶ್ವರನು ಅರಿವೆಣ್ಣಾದನು (೩೦೮). ಕೂಡಲೆ ಈಶ್ವರನು ರೋಷಾವಿಷ್ಟನಾಗಿ—"ಹಿರಿಯರೆಂಬುದನ್ನು ಬಗೆಯದೆ ಕೊಬ್ಬಿನಿಂದ ಎನ್ನೊಡನೆ ಕಾದಿದೆ. ಆದುದರಿಂದ ನೀನು ನಿನ್ನ ಪತ್ನಿಯಿಂದಗಲಿ ಇತರರಿಗೆ ತಿಳಿಯದ ಹಾಗೆ ನಿನ್ನನ್ನು ನೀನು ಮರೆತಿರು." ಎಂದು ಶಪಿಸಿದನು. (೩೧೨) ಇದನ್ನು ಬಸಂತನ ಮುಖದಿಂದ ಕೇಳಿದ ಇಚ್ಛೆಗಾರ್ತಿ ಇನ್ನೂ ಪ್ರಲಾಪಿಸುತ್ತಿರುವಳು (೩೧೨). ಶಾಪಗ್ರಸ್ತನಾದ ನೀನು ಪತ್ನಿಯಿಂದಗಲಿ ಇಲ್ಲಿ ನನೆಯಂಬ ನೆಂಬರಸಾಗಿರುವೆ. ನನ್ನ ಈ ಮಾತನ್ನು ಕೇಳಿದಾಗಲೇ ನಿನಗೆ ಶಾಪವಿಮೋಚನೆಯು ಆಯಿತು. ಈ ಬಾಳೆ ಮುಂತಾದುವು ನಿನ್ನ ಸೈನ್ಯವು—ಎಂದು ಹೇಳಿ, ಆ ಅಪ್ಸರಸ್ತ್ರೀಯು ತನ್ನ ನೆಲೆಗೆ ಹಾರಿ ಹೋದಳು (೩೧೯).

ಇದನ್ನೆಲ್ಲಾ ಕೇಳುತ್ತಿದ್ದ ಒಂದು ಗಿಳಿಯು ಕಂಪುಪೊಳಲಿಗೆ ಹೋಗಿ, ಈ ಸಂಗತಿಯನ್ನು ತಿಳಿಸಿತು. (೩೭೦) ವಸಂತನು ಬಹಳ ಸಂತೋಷದಿಂದ ಪಟ್ಟಣವನ್ನು ಸಿಂಗರಿಸಿ, ಇಚ್ಛೆಗಾರ್ತಿ ಮೊದಲಾದವರೊಡನೆ ಇದಿರು ಬಂದು, ಕಾವನನ್ನು ಕರೆದುಕೊಂಡು ಹೋಗಿ ವಿಜೃಂಭಣೆಯಿಂದ ಪಟ್ಟಾಭಿಷೇಕವನ್ನು ಮಾಡಿದನು. (೩೪೧-೪೨) ಆ ಮೇಲೆ ಕಾವನೂ ರತಿಯೂ ಸುಖದಿಂದ ಇದ್ದರು.

~

# ಟಿಪ್ಪಣಿ.

೧. ಗಾಡಿ-" ಗಾಡಿಯೆನಲ್ಕೊಬಗು. " ಚತುರಾಸ್ಯನಿಘಂಟು. ಸೋಲಿಸು-ಮೋಹಪಡಿಸು; ಪ್ರ. " ಕಣ್ಸೋಲಮನಱಿಯಂ ಪೆಱ | ವೆಣ್ಸುರವಧುಗೆಣೆಯೆನಿಪ್ಪೊಡಂ. " ಉರ್ಕು-ಔದ್ಧತ್ಯ. ಅಂಬು-ಬಾಣ. ಅದಟರ್-ಪರಾಕ್ರಮವುಳ್ಳವರು. ಏರ್ಗ-ಅಭಿವೃದ್ಧಿ; ಹೊಸಗನ್ನಡದಲ್ಲಿ ಏಳಿಗೆ. ಪಜ್ಜಳಿಪ್ಪ-ಪ್ರಜ್ವಲಿಸುವ, ಪ್ರಕಾಶಿಸುವ; ಇಲ್ಲಿ ಅಂತ್ಯ ಪಕಾರಕ್ಕೆ " ಇತಃ ಪೋಚಿ " ಎಂಬ ಶ. ಶಾ. 57 ನೆಯ ಸೂತ್ರದಿಂದ ದ್ವಿತ್ವ ವಿಕಲ್ಪ. ಜಸ-ದ್ಭ. ಯಶಸ್. ಎಣ್ದೆಸೆ= ಎಣ್ಟು+ದೆಸೆ, " ಚರಮಕ್ಕೆ ಲೋಪವೆಣ್ಟರ್ಕ್ಕುಂ " ಶ. ದ. 189. ಈಗಾವಗಂ= ಈಗೆ+ಆವಗಂ; 'ಈ' ಧಾತುವಿನ ಆಶೀರೂಪ, ಈಗೆ; ವಿಧ್ಯಾದ್ಯರ್ಥದಲ್ಲಿ ಪ್ರಥಮ ಪುರುಷದಲ್ಲಿ ಧಾತುವಿಗೆ 'ಗೆ' ಪ್ರತ್ಯಯ ಸೇರುತ್ತದೆ. ಜಾಣ್ನುಡಿ= ಜಾಣ್+ನುಡಿ; ಇಲ್ಲಿ ನಕಾರ ಣಕಾರವಾಯಿತು, ಶ. ದ. 158. ಮೆಯ್ಸಿರಿ-ಶೋಭೆ; ಅವಯವಾರ್ಥ, ದೇಹಶ್ರೀ. ನನೆ-ಮೊಗ್ಗು. ಬಲ್ಲಹಂ-ದ್ಭ. ವಲ್ಲಭ.

ಕಂ|| ಆದಿಕವೀಶ್ವರವರವಚ |
ನೋದಿತಮೆಸಿಸಿದ ಮಹಾಕೃತಿಗೆ ವದನಂ ತಾ ||
ನಾದುದು ಬಗೆವಂದಾಶೀ |
ರ್ವಾದನಮಸ್ಕಾರವಸ್ತುನಿರ್ದೇಶಂಗಳ್ || ಎಂದು

ಉದಯಾದಿತ್ಯಾಲಂಕಾರದಲ್ಲಿ ಹೇಳಿರುವ ಮಂಗಳಗಳಲ್ಲಿ ಆಶೀರೂಪವಾದ ಮಂಗಳವು ಇಲ್ಲಿ ಮಾಡಲ್ಪಟ್ಟಿದೆ.

೨. ಸಿರಿ-ದ್ಭ. ಶ್ರೀ. ಮಾದೇವ-ದ್ಭ. ಮಹಾದೇವ; ಮಹಚ್ಛಬ್ದ ಸಹಶಬ್ದಗಳಿಗೆ ಸಮಾಸದಲ್ಲಿ ಮಾ, ಸಾ ಎಂಬಿವು ಆದೇಶವಾಗಿ ಬರುತ್ತವೆ; ಉ. ಮಹಾಜನಂ= ಮಾಜನಂ, ಸಹವಾಸಿ= ಸಾವಾಸಿ; ಶ. ದ. 291 ಎಱೆಯ-ಸ್ವಾಮಿ. ಕೆಂದಾವರೆ= ಕೆಚ್ಚನೆ+ತಾವರೆ, ಕೆಂಪಾದ ಕಮಲ ಶ. ದ. 182. ಪೊರೆಗೆ-ಧಾ. ಪೊರೆ, ಪೋಷಣೆ. ಸಿರಿಗಂಪು-ಶ್ರೇಷ್ಠವಾದ ಪರಿಮಳ. ಪಱಿಮೆವಱು= ಪಱಿಮೆಯ ವಱು, ತುಂ

ಬಿಯ ಮರಿ ; ಇಲ್ಲಿ " ಸ್ವರಾದ್ವಃ ಪವರ್ಗಸ್ಯ " ಎಂಬ ಶ. ಶಾ || ಸೂ 91 ರಿಂದ ಮಕಾರಕ್ಕೆ ವಕಾರ ಬಂದಿದೆ. ಎಂತು+ಅಂತು+ಒಲವಿಂದಂ ; ಒಲವು-ಪ್ರೀತಿ. ಇಲ್ಲಿ ಸಿರಿಯರಸನ ಮಾದೇವನ ಸರಸತಿಯೆಱೆಯನ ಎಂಬುದಕ್ಕೆ ಬದಲಾಗಿ ವಿಭಕ್ತಿವಚನಪಲ್ಲಟದಿಂದ " ಸಿರಿಯರಸಂ ಮಾದೇವಂ ಸರಸತಿಯೆಱೆಯರ್ಕಳ " ಎಂದು ಪ್ರಯೋಗಿಸಿದೆ; ಹೀಗೆ ಪ್ರಯೋಗಗಳುಂಟು. ಪ್ರ. " ಕಣಚರಣೋಕ್ತಿ ಜೈಮಿನಿಯ ವಾಣಿಗಳಿಂ ಮಿಗೆ ತಾಳ್ದಿ ಜಾಣ್ಮೆಯಂ "ಮಿತ್ರವಿಂದಾಗೋವಿಂದಂ. ಅಂಕ. ೧. ೧೧ ; " ಸಾಜದಕರ್ಪುರ್, ನೇವುರದ ಪಚ್ಚೆವಣಿಯ ಪಸುರ್ಪು, ಉಟ್ಟ ಪೀತಾಂಬರದ ಪೊಂಬೊಗರ್ಗಳಿಂ ಮೂವಣ್ಣಂ ಬಡೆದು." ಚಿಕದೇವರಾಯ ವಂಶಾವಳಿ. ಪು ೩೯

೩. ಗರುವಿಕೆ= ಗರುವ+ಇಕೆ, ಗೌರವ ; ಭಾವಾರ್ಥದಲ್ಲಿ " ಇಕೆ " ಶ ಶಾ || 431. ಇಂಬು-ಸ್ಥಾನ ; ಪ್ರ. " ಆಸ್ಯವಿಂಬಿಲ್ಲ ಭಾಸುರನೇತ್ರದ್ವಿತಯಪ್ರಚಾರತೆಗೆ. " ಗಿರಿಜಾಕಲ್ಯಾಣ. ಆ. ೪. ತವರ್ಮನೆ-ಹುಟ್ಟಿದ ಮನೆ, ಜನ್ಮ ಭೂಮಿ. ಮೈಮೆ-ದ್ಭ. ಮಹಿಮೆ. ಮೇರೆ-ಎಲ್ಲೆ, ಗಡಿ. ನನ್ನಿ-ಸತ್ಯ ; ಪ್ರ. " ತಂದೆಯ ನನ್ನಿಗಿತ್ತು ಧರೆಯಂ " ಪಂಪರಾಮಾಯಣ. ಆ. ೬. ಆಗರಂ-ಗಣಿ, ತ್ಸ. ಆಕರ. ಅಱಿತ-ಜ್ಞಾನ ; ಅಱಿ, ಜ್ಞಾನೇ ಎಂಬುದರ ಭಾವರೂಪ. ಗೊತ್ತು-ಇರುವ ಸ್ಥಾನ. ಪೆಸರ್ವೆತ್ತ= ಪೆಸರ್+ಪೆತ್ತ-ಹೆಸರನ್ನು ಹೊಂದಿದ, ಪ್ರಖ್ಯಾತವಾದ. ನೆಗಟ್ತೆಗೆ-ಯಶಸ್ಸಿಗೆ ; ಧಾ. ನೆಗಟ್-ಉದ್ಯೋಗಖ್ಯಾತಯೋಃ. ತಾಣ-ದ್ಭ. ಸ್ಥಾನ. ಬಗೆ-ಹೃದಯ ; ಪ್ರ. " ಬಗೆಗೊಳ್, ಬಗೆವನೆ. " ಪೊಗಟ್ತೆ-ಪ್ರಸಿದ್ಧಿ. ಆಂತಳ್--ಧರಿಸಿದಳು ; ಧಾ. ಆನ್-ಧಾರಣೇ. ಕೂರ್ಮೆ-ಪ್ರೀತಿ; ಕೂರ್ ಸ್ನೇಹೇ ಎಂಬುದರ ಭಾವನಾಮ. ಒಸೆದು-ಪ್ರಸನ್ನಳಾಗಿ ; ಧಾ. ಒಸೆ-ಪ್ರಸನ್ನೇ. ಕಬ್ಬ-ದ್ಭ. ಕಾವ್ಯ. ಬರ್ದು-" ಬರ್ದನೆ ಪ್ರಾಪ್ತಿಯೊಳಕ್ಕುಂ " ಕರ್ಣಾಟಕ ನಿಘಂಟು ೧೭.

ಪೂಜ್ಯಳಾಗಿಯೂ ; ಸುಂದರಳಾಗಿಯೂ, ಮಹಿಮೆಯುಳ್ಳವಳಾಗಿಯೂ, ಸತ್ಯಕ್ಕೆ ನೆಲೆಮನೆಯಾಗಿಯೂ, ಜ್ಞಾನಕ್ಕೆ ಆಶ್ರಯಳಾಗಿಯೂ, ಪ್ರಖ್ಯಾತಿಗೆ ಪಾತ್ರಳಾಗಿಯೂ ಕವಿಹೃದಯಸ್ಥಳಾಗಿಯೂ ಇರುವ ಸರಸ್ವತಿ ನಮಗೆ ಕವಿತಾಪ್ರಾಪ್ತಿಯನ್ನು ಕೊಡಲಿ! ಎಂದು ಪದ್ಯಕ್ಕೆ ತಾತ್ಪರ್ಯಾರ್ಥ.

೪. ಸನ್ನಿದ-ದ್ಸ.ಸನ್ನಿಹಿತ, ಸಮೀಪ. ಕಣ್ಣಮಯ್ಯ-ಈತನಿಗೆ ಕರ್ಣಪಾರ್ಯನೆಂದು ಸಾಮಾನ್ಯವಾದ ಹೆಸರು ; ಈತನು ನೇಮಿನಾಥಪು ರಾಣವನ್ನು ರಚಿಸಿದವನು. ಕಡುಜಾಣ್— ಕಡಿದು+ಜಾಣ್, ಅಧಿಕ ವಾದ ಜಾಣ್ಮೆ. ರನ್ನ-ಕವಿರತ್ನ ; ಪರಶುರಾಮಚರಿತ, ಚಕ್ರೇಶ್ವರಚರಿತ, ಅಜಿತನಾಥಪುರಾಣ, ಗದಾಯುದ್ಧ, ಇವುಗಳನ್ನು ರಚಿಸಿದವನು. ಗಜಗ-ಇವನ ವಿಷಯವಾಗಿ ಇನ್ನೂ ಏನೂ ಗೊತ್ತಿಲ್ಲ. ಬಿನ್ನಣ-ದ್ಸ.ವಿಜ್ಞಾನ, ಕೌಶಲ. ಅಗ್ಗಳ-ಚಂದ್ರಪ್ರಭಪುರಾಣವನ್ನು ರಚಿಸಿದವನು. ಕಾಣ್ಕೆ-ನೈಪುಣ್ಯ ; ಧಾ. ಕಾಣ್, ದರ್ಶನೇ : ಮತ್ತೊಂದರ್ಥ ಉಪಾಯನ, (ನಜರು) ಈಯರ್ಥಕ್ಕೆ (೧೪೩)ನ್ನು ನೋಡಿ; ಇದಕ್ಕೆ ಹೊಸಗನ್ನಡದ ರೂಪ, ಕಾಣಿಕೆ. ಜನ್ನಿಗ-ಕೇಶಿರಾಜನ ಸೋದರದಮಾವ: ಯಶೋಧರಚರಿತೆ, ಅನಂತನಾಥಪುರಾಣ, ಇವುಗಳನ್ನು ರಚಿಸಿದವನು.

೫. ಒಪ್ಪಂಬೂಸಿದವೋಲ್—ಒಪ್ಪವಿಟ್ಟ ಹಾಗೆ. ಶ. ದ. 167 ರ ಪ್ರಕಾರ ಕ್ರಿಯಾಸಮಾಸದಲ್ಲಿ 'ಕನ್ನಡದದಂತಕ್ಕಮುದಂತಕ್ಕಂ ಬಿಂದು ವಿಕಲ್ಪಂ' ಉ ; ಬೆಸಂಬಡೆದಂ, ಬೆಸವಡೆದಂ. ತೆಱಂಬೊಳೆವ-ಚೆನ್ನಾಗಿ ಹೊಳೆಯುವ ; "ತೆಱಂ ಬೊಳೆದುದೆಂದು ತೋರ್ಕೆವಡೆದ ಕಾಂತಿ" ಶಬ್ದಸಾರ. ಕೊಂಕು-ವಕ್ರೋಕ್ತಿ ; "ಕೊಂಕುಶಬ್ದಃ ಕುಟಿಲ ವಚನಂ" ಶ. ಶಾ|| 372 ವ್ಯಾ. ಒಪ್ಪ....ಕುಂ-ಒಪ್ಪಹಾಕಿದ ಒಡವೆಯಂತೆ ಹೊಳೆಯುತ್ತಿರುವ ವಕ್ರೋಕ್ತಿಯೆಂದು ಅರ್ಥ. ಇನಿದಾದ-ಮಧುರವಾದ. ಬರ್ದುನುಡಿ-ಪ್ರೌಢೋಕ್ತಿ. ತಳ್ತ-ಕೂಡಿಕೊಂಡಿರುವ ; ಧಾ. ತಳ್. ಓಜೆ-ಗಾಢವಾದ ಪದನ್ಯಾಸಕ್ಕೂ, ಅರ್ಥದಲ್ಲಿನ ಪ್ರೌಢಿಗೂ ಓಜೆಯೆಂದು ಹೆಸರು. ನಿಲ್ವಿನಂ—ನಿಲ್+ವಿನಂ, ನಿಂತಿರಲು ; ವಿನಂ, ವಿನೆಗಂ, ವನ್ನಂ, ವನ್ನೆಗಂ ಎಂಬ ಪ್ರತ್ಯಯಗಳು ಕ್ರಿಯೆಗೆ ಸೇರಿ ಮುಂದಿನ ಪೂರ್ಣಕ್ರಿಯೆಯಲ್ಲಿ ಅನ್ವಯಿಸುತ್ತವೆ, ಎಂದು ಶ. ಶಾ. ಸೂ. 588. ಎಂತಪ್ಪಂಗಂ-ಎಂಥವನಿಗೂ. ಎಕ್ಕಸರಂ-ಏಕಾವಳಿ ; ಶ. ಶಾ. ಸೂ. 375 ರ ಪ್ರಕಾರ ಸಮಾಸಮಾಡುವಾಗ ಪೂರ್ವಪದವು 'ಏಕ' ಶಬ್ದವಾಗಿ ಉತ್ತರಪದವು ವ್ಯಂಜನಾದಿಯಾದ ಸಂಸ್ಕೃತಪದವೇ ಆಗಲಿ ಆಗಿದ್ದರೆ, 'ಏಕ' ಶಬ್ದಕ್ಕೆ ಎಕ್ಕಾದೇಶ ಬರುತ್ತದೆ; ಉ. ಎಕ್ಕಾಂಗ. ಕೊರಲ್ಗೊಳ್ಳದೇ-ಕಣ್ಠವನ್ನು ಅಲಙ್ಕರಿಸುವದಿಲ್ಲವೇ.

ವ್ಯಂಗ್ಯದಿಂದಲೂ, ಶಬ್ದಾಲಂಕಾರದಿಂದಲೂ, ಅರ್ಥಾಲಂಕಾರ ದಿಂದಲೂ, ಮನೋಹರವಾಗಿ ದೋಷರಹಿತವಾದ ಕಾವ್ಯವು ಮುಕ್ತಾ ಹಾರದಂತೆ ಯಾರ ಕಣ್ಮನವನ್ನು ತಾನೆ ಅಲಙ್ಕರಿಸುವುದಿಲ್ಲ? ಎಂದು ಪದ್ಯಕ್ಕೆ ತಾತ್ಪರ್ಯಾರ್ಥ.

೬. ಪುರುಳುಂ-ಅರ್ಥಗಾಂಭೀರ್ಯವೂ, ಲಕ್ಕಣಮುಂ-ಉತ್ತಮ ಕಾವ್ಯಲಕ್ಷಣವೂ, ಮೆಯ್ಸಿರಿಯುಂ-ಬಂಧಗೌರವವೂ, ತಳ್ತಿಸೆಯೆ-ಸೇರಿ ರಲು ಮನೋಹರವಾಗುವಂತೆ, ಹೇಳಿದ ಕಾವ್ಯವು, ಪುರುಳುಂ-ಅನರ್ಘ್ಯ ತೆಯೂ, ಲಕ್ಕಣಮುಂ-ಸುಲಕ್ಷಣವೂ, ಮೆಯ್ಸಿರಿಯುಂ-ಕಾನ್ತಿಯೂ, ತಳ್ತಿಸೆವ-ಕೂಡಿರಲು ಪ್ರಕಾಶಿಸುವ, ರತ್ನದಂತೆ; ಎಂತುಂ-ಸರ್ವಪ್ರಕಾರದ ಲ್ಲಿಯೂ, ಎರ್ದೆವುಗದೆ--ಹೃದಯಙ್ಗಮವಾಗುವದಿಲ್ಲವೆ?

೭. ಒಳ್ಪಿನ-ಸೊಗಸಾದ; ಒಳ್ಳಿತರ ಭಾವಂ ಒಳ್ಪು. ಚದುರಂ-ಚಾತುರ್ಯವುಳ್ಳವನು. ನಲವಿಂ-ಸಂತೋಷದಿಂದ. ಕುಂದು (-ಕೊರತೆ)+ ಅದು+ಏಂ+ಆದಪುದೆ?

೮. ಕಬ್ಬಿಗ-ಕವಿ: ಕಬ್ಬ+ಇಗ (ಮಾಡುವವನು) ಉಱದರ್-ಮಿಕ್ಕವರು. ಕಡಂದುಱು-ಕಣಜದ ಹುಳು.

೯. ಎಱಗುವಂ-ನಮಸ್ಕರಿಸುವನು; ಧಾ. ಎಱಗು-ಪ್ರಣತೌ. ಅರುಹದ್ಭ. ಅರ್ಹತ್, ಜಿನ. ಓದು—ವಿದ್ಯೆ. ಪೆಱವೆಣ್=ಪೆಱತು+ ಪೆಣ್, ಪರಸ್ತ್ರೀ. ಶ. ದ. 177. ನೆರೆದು-ಧಾನೆರೆ-ಸಂಯೋಗೇ. ಲೆಕ್ಕಿಗರ ಹಿರಿಯ ಮೇ॥ ರೈಸ್ ಸಾಹೇಬರವರು ಶಾನುಭೋಗರಲ್ಲಿ ದೊಡ್ಡವನೆಂದು ಅಭಿಪ್ರಾಯಪಡುವಂತೆ ತೋರುತ್ತದೆ. ಆದರೆ 'ಲೆಕ್ಕಿಗ' ಎಂಬುದು 'ಸಂಖ್ಯಾವಾನ್' ಎಂಬ ಸಂಸ್ಕೃತದ ಪ್ರತಿಪದವೆಂದೂ, ಆದುದರಿಂದ ವಿದ್ವಾಂಸನೆಂಬ ಅರ್ಥವನ್ನು ಕೊಡುತ್ತದೆಯೆಂದೂ ಕೆಲ ವರು ಅಭಿಪ್ರಾಯ ಪಡುತ್ತಾರೆ.

೧೦. (ಇವರು) ಅಱಿವರೊಳ್, ಅಕ್ಕರಕ್ಕೆ-ವಿದ್ಯೆಯಲ್ಲಿ, ದಿಮ್ಮಿದರ್-ಪ್ರೌಢರು; ನುಡಿಯೊಳ್ ಕಡುಜಾಣರ್; ಅಂದದೊಳ್-ಸೌನ್ದ ರ್ಯವಲ್ಲಿ, ಪೊಮ್ಮಿದರ್-ಹೆಚ್ಚಾದವರು; ಒಂದಿ ನಿಂದ ಸಿರಿಯೊಳ್, ಪಿರಿ ಯರ್ಗೆ, 'ಎಡೆಗೊಟ್ಟು-ಅವಕಾಶವನ್ನು ಕೊಟ್ಟು, ಎಂದರೆ, ತಮ್ಮ ಐಶ್ವ ರ್ಯವನ್ನು ಇತರರೊಡನೆ ಅನುಭವಿಸುತ್ತಾ ಬಾಳುವರು, ಎಂದುಂ, ಉ

ಮ್ಮಳಿಪರ್ಗೆ-ಕೋಪಿಸುವರಲ್ಲಿ ಆತನ ಮಕ್ಕಳಿನಿಪ್ಪ ಸಾಂತನೂ, ಗುಮ್ಮಟನೂ, ವೈಜಣನೂ, ಮುಳಿಯರ್-ಕೋಪಿಸಿಕೊಳ್ಳರು ಎಂದರ್ಥ. ಅಕ್ಕರಕ್ಕೆ-ಎಂಬಲ್ಲಿ ಚತುರ್ಥಿಯು ಸಪ್ತಮರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ. ಶ. ದ. 136.

೧೧. ನೋೞ್ಪೊಡೆ=ನೋಡು+ವೊಡೆ, ನೋಡಿದರೆ; ಇಲ್ಲಿ ಧಾತ್ವಂತ್ಯದ 'ಡು' ಱುವಾಗಿದೆ; ಮತ್ತು ಱುದ ಮುಂದಣ ವ ಪ ಆಗಿದೆ. ಶ. ಶಾ. 82; 514 ನೆಯ ಸೂ. ಚೆಲ್ವುವರಿವ= ಚೆಲ್ವು+ಪರಿವ, ಸೌನ್ದರ್ಯಪ್ರಸರವುಳ್ಳ. ಎಳವೆಣ್ದಿರ್=ಎಳದು+ಪೆಣ್ದಿರ್. ದಗುಲ-ದ್ಭ. ದುಕೂಲ. ತಳೆವುದು-ಧರಿಸುವುದು. ಎಚ್ಚರಂ-ಆಧಿಕ್ಯ; ಹೊಸಗನ್ನಡದ ರೂಪ ಎತ್ತರ.

ಹೀಗೆ ಕವಿಗಳು ತಮ್ಮ ಸೌದರ್ಯಾತಿಶಯವನ್ನು ಹೇಳಿಕೊಳ್ಳುವ ಪದ್ಧತಿಯುಂಟು. ಕವಿಕಾಮನು ಶೃಂಗಾರರತ್ನಾಕರದಲ್ಲಿ „ ಚಳದಳಕದಲಸಗಮನದ | ಪೊಳೆವಧರದ ವಿಮಳನಖದ ಮೃದುಪದಗತಿಚಾ || ಪಳನಯನದ ತನುಮಧ್ಯದ | ಲಲನಾಮುಖಲಕ್ಷ್ಯಲಕ್ಷಣ ಕವಿಕಾಮಂ ||" ಎಂದು ಹೇಳಿಕೊಂಡಿದ್ದಾನೆ. ಹೀಗೆಯೇ ಆದಿಪಂಪನೂ ಆದಿಪುರಾಣದಲ್ಲಿ ಪ್ರಥಮಾಶ್ವಾಸದಲ್ಲಿ ಹೇಳಿಕೊಳ್ಳುತ್ತಾನೆ.

೧೩. ಸಿರಿವೆಣ್-ಲಕ್ಷ್ಮಿ. ನಿಚ್ಚ-ದ್ಭ. ನಿತ್ಯ.

೧೪. ಗಿಳಿವಿಂಡು= ಗಿಳಿ+ಪಿಂಡು, ಗಿಳಿಗಳ ಗುಂಪು. ಮಿಳಿರ್ದಾಡುವ-ಸಂಚರಿಸುವ; ಧಾ. ಮಿಳಿರ್, ಸ್ಪನ್ದನೇ. ಬಂಬಲ್-ಸಮೂಹ. ತೊಂಗಲ್-ಗುಚ್ಛ. ನಡೆನೋಡುವ-ನಾಟಿಕೊಳ್ಳುವಹಾಗೆ ನೋಡುವ; ಭಾವಗರ್ಭಿತವಾದ ದೃಷ್ಟಿಯಿಂದ ನೋಡುವ; ಇಲ್ಲಿ ನಡೆ= ನಡು+ಸತ್ಯರ್ಥದ 'ಎ.' ಪೊರೆದು-ಸವರಿಕೊಂಡು; ಪ್ರ. „ ಕುಮುದರಜಂಗಳೊಳ್ ಪೊರೆದು" ಕಾದಂಬರಿ ೬೩೩. ತೀಡುವ-ಬೀಸುವ; ಭಾವನಾಮ ತೀಟ. ತೆಂಬೆಲರ್= ತೆಙ್ಕಣ+ಎಲರ್, ದಕ್ಷಿಣಮಾರುತ, ಎಂದರೆ ಮಲಯಮಾರುತ; ಶ. ದ. 176. ತಿಙ್ಗಳ್-ಚಂದ್ರಿಕೆ. ಸೋಲಿಸದೆ-ಮೋಹಪಡಿಸದೆ.

೧೫. ಸಕ್ಕದ-ದ್ಭ. ಸಂಸ್ಕೃತ. ಬಗೆಗೊಳೆ-ಹೃದಯಂಗಮವಾಗುವ ಹಾಗೆ. ಆಱರ್-ಸಮರ್ಥರಾಗರು. ಇನಿತುಂ-ಸ್ವಲ್ಪವೂ. ಸಲೆ-

ಚೆನ್ನಾಗಿ ; ಇದು ಸಲ್-ಸಮಾಖ್ಯಾತೌ ಎಂಬ ಧಾತುವಿನ ಸತಿಸಪ್ತ ಮಿಯ ರೂಪ ; ಇದನ್ನು ಕ್ರಿಯಾವಿಶೇಷಣವಾಗಿ ಸಾಧಾರಣವಾಗಿ ಪ್ರಯೋಗಿಸುತ್ತಾರೆ : ಇದರಂತೆಯೇ ಮಿಗೆ, ಎಯ್ದೆ, ಒಗುಮಿಗೆ ಮೊದ ಲಾದುವುಗಳನ್ನು ಪ್ರಯೋಗಿಸುವುದುಂಟು. ಪೆಂಪು-ಉನ್ನತಿ : ಶ. ದ. 212. ಬಲ್ಪು-ಪರಾಕ್ರಮ. ದೊರೆಕೊಂಡುದು-ಧಾದೊರೆಕೊಳ್-ಪ್ರಾಪ್ತೌ.

೧೬. ನಾನ್-ಕೆಲವರು ಈರೂಪವಿಲ್ಲವೆಂದು ಹೇಳುತ್ತಾರೆ. ಆದರೆ ಈ ರೂಪವುಂಟು (ಶ. ಶಾ. 288 ರ ವ್ಯಾಖ್ಯಾನವನ್ನು ನೋಡಿ) ಪ್ರ. "........ಸಂದೇ | ಹವಿದೇಕೇಜ್ವೋಗಿ ನಾವಲ್ಲಿಯ ದಿಟ ಮದು ತಾನೆಂಬುದಂ ನೋಟ್ಪುಮಲ್ತೇ " ಕಾದಂಬರಿ. ೩೮೯.

ಅಚ್ಚಗನ್ನಡ-ಕವಿಯು ಅಚ್ಚಗನ್ನಡದಲ್ಲಿಯೇ ಈ ಕಾವ್ಯವನ್ನು ಬರೆದಂತೆ ಹೇಳಿದ್ದರೂ, ಸಮಸಂಸ್ಕೃತಪದಗಳೂ ತದ್ಭವಪದಗಳೂ ವಿಶೇಷವಾಗಿ ಈ ಗ್ರಂಥದಲ್ಲಿ ದೊರೆಯುತ್ತವೆ.

೧೭. ಸಿಂಗರ-ದ್ಭ.ಶೃಂಗಾರ, ಸೌಂದರ್ಯ. ದೇಸೆ-ವಿಲಾಸ. ಪೊದ ಳ್ದಿರೆ-ಪ್ರಖ್ಯಾತವಾಗಿರಲು ; ಧಾ. ಪೊದಳ್. ಡಾಳಂ-ಕಾಂತಿ. ಗೆಡೆ ಗೊಂಡು-ಚೆನ್ನಾಗಿ ಸೇರಿಕೊಂಡು : ಗೆಡೆ-ಸ್ನೇಹ ; ಪ್ರ. ' ಗೆಡೆವಕ್ಕಿ ; ' ಇದಕ್ಕೆ ಗೆಳೆ, ಕೆಳೆ ಎಂಬ ಎರಡು ರೂಪವುಂಟು. ಬೀರ-ಪರಾಕ್ರಮ. ಪರಿಗೊಂಡುದು-ಪ್ರವಹಿಸಿತು.

೧೮. ಬೆಂಚೆ-ಅಲ್ಪಸರಸ್ಸು. ನೀರ್ವೂ= ನೀರ್+ಪೂ, ತಾವರೆ. ಮುಸುಱು-ಮುತ್ತಿ ; ಧಾ. ಮುಸುಱು, ಸಂಘನ್ನೇ. ಬಟವಿಡಿದು-ಮಾರ್ಗ ವನ್ನು ಹಿಡಿದು. ಎಡೆಯಾಡುವ-ಸಂಚರಿಸುವ. ಸಬರಿ-ದ್ಭ.ಶಬರೀ, ಬೇಡರ ಹೆಂಗಸು. ಏಡಿಸುವ-ಹಾಸ್ಯಮಾಡುವ, ಇದಕ್ಕೆ ರೂಪಾನ್ತರ ಏಳಿಸುವ. ಬಯಲ್-ಗದ್ದೆ. ಪೊನಲ್-ಪ್ರವಾಹ. ಬೆಳೆಗೆಯ್-ಪೈರುಳ್ಳ ಗದ್ದೆ. ಸೋವ-ಓಡಿಸುವ. ನಾಡ ಗಾಡಿಕಾರ್ತಿಯರ-ನಾಡಿನ ವಿಲಾಸವತಿ ಯರ. ಆಗಸ-ದ್ಭ.ಆಕಾಶ. ಬಟ್ಟೆಗ-ಮಾರ್ಗಸ್ಥ. ಗರಗರಿಕೆ-ಸೊಗಸು. ಮೇಲೂರ್-ಸ್ವರ್ಗ. ಮುಂಡಾಡು-ಮುದ್ದಿಸು. ಅರಗಿಳಿ= ಅರಸು+ಗಿಳಿ, ರಾಜಶುಕ. ಶ. ದ. 177. ಬಗ್ಗಿಪ-ಧ್ವನಿಮಾಡುವ : ಭಾವರೂಪ ಬಗ್ಗಣೆ ; ಧಾ. ಬಗ್ಗಿಸು.

೧೯. ಪಲವುಂ ನಾಲಗೆಯುಳ್ಳವಂ-ಆದಿಶೇಷ; ಹೇಗೆ ? ಆಱನು-ಸಮರ್ಥನಾಗನು. ಮತ್ತಿನ-(ಅವ್ಯಯ) ; " ಮತ್ತಿನ-ಇತರಾರ್ಥಃ " ಶ. ಶಾ. 20 ವ್ಯಾ. ಮಾನಿಸ-ದ್ಭ. ಮಾನುಷ. ಕಾಲೂರ್-ಹಳ್ಳಿ.

೨೦. ಮುಗಿಲ್-ಮೇಘ. ಓಳಿ-ಗುಂಪು. ಹಳ್ಳಿಗಳೆಲ್ಲವೂ ಪಟ್ಟಣಗಳಂತೆ ಸಮೃದ್ಧವಾಗಿಯೂ, ಕೆರೆಗಳೆಲ್ಲವೂ ಮೇಘಗಳಂತೆ ಜಲಭರಿತಗಳಾಗಿಯೂ, ಕಾಡುಗಳೆಲ್ಲವೂ ಉದ್ಯಾನವನಗಳಂತೆ ವಿಹಾರಾನುಕೂಲಗಳಾಗಿಯೂ ಇದ್ದುವು ; ಎಂದರೆ ಆ ದೇಶವು ಒಳ್ಳೆಯ ಸಮೃದ್ಧಸ್ಥಿತಿಯಲ್ಲಿ ಇದ್ದಿತೆಂದು ತಾತ್ಪರ್ಯ.

೨೧. ಸಂಪಗೆ-ದ್ಭ. ಚಂಪಕಾ. ದಾಳಿಂಬ-ದ್ಭ. ದಾಡಿಮ. ಚೆಂದೆಂಗು= ಕೆಚ್ಚನ್+ತೆಂಗು ; ಶ. ದ. 182. ಕೌಂಗು-ಅಡಕೆಯ ಮರ. ಉತ್ತಮವಾದ ಮರಗಿಡಗಳೇ ಪ್ರಬಲವಾಗಿದ್ದುವೆಂದು ತಾತ್ಪರ್ಯ.

೨೨. ಅಡರ್ದು-ಹತ್ತಿ. ಕಡುಪು-ಕೊಬ್ಬು. ಈಡಾಡೆ-ಬೀಸಾಡಲು. ಓವುತ್ತುಂ-ಪಾಲಿಸುತ್ತಾ.

೨೩. ಉಱೆ-ಅವ್ಯಯ, ಹೆಚ್ಚಾಗಿ. ಕಾಲ್-ಪಾದ, ಕಾಲುವೆ. ಕಲವೆ-ದ್ಭ. ಕಲಮಾ-ನೆಲ್ಲು, ಬತ್ತದ ಬೆಳೆ.

೨೪. ಪೋರ್ವ-ಹೋರಾಡುವ. ಎಯ್ದುಣ್ಮುವ= ಎಯ್ದೆ+ಉಣ್ಮುವ, ವಿಶೇಷವಾಗಿ ಏಳುವ. ಸೀರ್ಪನಿ-ಸಣ್ಣಸಣ್ಣ ಹನಿ ; ಹೀಗೆಯೇ 'ಸೀರ್ದುಪ್ಪುಡ್,' 'ಸೀರ್ಕರಡಿ,' ಇತ್ಯಾದಿ.

ಇಲ್ಲಿ ಶೈತ್ಯ ಸೌರಭ್ಯ ಮಾಂದ್ಯಗಳೆಂಬ ವಾಯುವಿನ ಮೂರು ಗುಣಗಳನ್ನೂ ಹೇಳಿದಂತಾಗುವುದು.

೨೫. ಕೀಲ್-"ಕೆಳಗಿನೊಳ್ಕುದುರೆವಾಯೊಳಗಿರ್ಪಕರ್ಬುನದೊಳು| ಮೇಲಲ್ಲದವನೊಳುತ್ಪಾಟನದೊಳಂ ಕೀಲು" ಕ. ಶ. ೧೧೫. ಕವರ್-ಅಪಹರಿಸು ; ಹಗ್ಗ. ಬಂದಿ-ಸೆರೆ ; ಆಭರಣ. ತೊಡವು-ಆಭರಣ. ಏಱು-" ಆರೋಹಣದೊಳು ಗಾಯದೊಳೇಱು " ಕ. ಶ. ೧೧೭. ಮಡಿ-ಸಾಯುವುದು ; ಪಾತಿ. ಮೊಱೆ-ಮೊರೆಯಿಡುವಿಕೆ, ನಂಟು ; ನಂಟು ಎಂಬ ಅರ್ಥದಲ್ಲಿ " ತಾಯ್ಮೊರೆ, ತಂಗಿಮೊರೆ " ಎಂದು ಪ್ರಯೋಗವಿದೆ. ಪೊಡೆ-ಹೊಡೆಯುವಿಕೆ, ತೆನೆ. ಕಱು-" ಕಳಂಕಿನೊಳ್ ಕ್ಷೀರದೋ

ಹನದನಲ್ಲಿ ಕಱಿ" ಕ. ಶ. ೧೧೭. ತುಱುಗಾರ್ತಿ-ಹಸುವನ್ನು ಕಾಯು ವವಳು. ಪಿಡಿ-ಬಲಾತ್ಕಾರದಿಂದ ಹಿಡಿಯುವುದು; ಹೆಣ್ಣಾನೆ.

ಆ ನಾಡಿನಲ್ಲಿ ಕೀಟು ಎಂಬ ಶಬ್ದಕ್ಕೆ ಕುದುರೆಯ ಕಡಿವಾಣ ವನ್ನು ಕುರಿತು ಹೇಳುವಾಗ ಪ್ರಯೋಗವಿತ್ತೇ ಹೊರತು ಜನಗಳಲ್ಲಿ ಕೀಳುಜಾತಿಯವನು, ಕೆಟ್ಟ ಆಚಾರವುಳ್ಳವನು ಎಂಬ ಅರ್ಥದಲ್ಲಿ ಪ್ರಯೋಗವಿರಲಿಲ್ಲ : ಅಲ್ಲಿ ಎಲ್ಲರೂ ಉತ್ತಮರಾಗಿಯೂ ಸುಗುಣಿಗಳಾ ಗಿಯೂ ಇದ್ದುದರಿಂದ. ಹೀಗೆಯೇ ಮುಂದಣ ವಾಕ್ಯಗಳಿಗೂ ತಾತ್ಪ ರ್ಯಭಾವನೆ.

೨೬. ಪುದಿದ-ವ್ಯಾಪ್ತವಾದ; ಧಾ. ಪುದಿ-ಆಚ್ಛಾದನೇ. ಆವಲ್- "ಆವಲೆಂದು ಚೆನ್ನ್ಕೈಯ್ದಿಲೆ" ಶಬ್ದಸಾರ. ಕಾಲ್-ಕಾಲುವೆ. ಬಂದ ಮಾವು-" ಫಲಿತರಸಾಲ." ಶಬ್ದಸಾರ. ತೊಱೆ-ಹೊಳೆ. ಅಂಚೆ-ದ್ಭ. ಹಂಸ. ಬೆಲೆವೆಣ್-ಪಣ್ಯಸ್ತ್ರೀ, ಸೂಳೆ. ಈ ಪದ್ಯದ ಅಭಿಪ್ರಾಯವೇನು?

೨೮. ಕರುಮಾಡ-ಉಪ್ಪರಿಗೆ. ಬೆಟ್ಟು-ಬೆಟ್ಟ, ಪರ್ವತ. ಮು ನ್ನೀರ್-ಸಮುದ್ರ.

೨೯. ಮಿಸುಪ-ಮಿಸುಗುವ, ಹೊಳೆಯುವ; ಶ. ದ. 232. ಕಾವ ಣ-ದ್ಭ. ಕಾಯಮಾನ, ಚಪ್ಪರ.

೩೦. ಬಿಜ್ಜೋದರಿ-ದ್ಭ. ವಿದ್ಯಾಧರಿ. ಎಸಗುವ-ಬೀಸುವ. ಅಸಿ ಯಕೊಂಬು = ಅಸಿದು + ಕೊಂಬು, ಸಣ್ಣ ಕೊಂಬೆ. ಇಮ್ಮಾವು = ಇನಿ ದು + ಮಾವು, ರಸಾಲ. ಒಱಲ್ದು-ಪ್ರೀತಿಸಿ ಧಾ. ಒಱಲ್, ಸ್ನೇಹೇ. ತುಱುಸೆಱೆವಿಡಿವ-ಹಸುವನ್ನು ಸೆರೆಹಿಡಿಯುವ ಹಾಗೆ ಹಿಡಿದುಕೊಳ್ಳುವ. ನಱುಗಂಪು-ಸುವಾಸನೆ; ಪ್ರ. 'ನಱುಸುಯ್' 'ನಱುನೆಯ್' ರಯ್ಯ- ದ್ಭ. ರಮ್ಯ. ಸೊಂದಿಗೋಡಗ-" ಪೇರಣಿಲ್ " ಚತುರಾಸ್ಯ. ತಿಂತಿಣಿ ವಣ್ಣನಾಂತ-ಜೊಂಪಲು ಜೊಂಪಲಾಗಿರುವ ಹಣ್ಣುಗಳುಳ್ಳ. ನಟ್ಟ ನಡು = ನಡು + ನಡು. ಶ. ದ. 181

೩೧. ನುಣ್ಚರ = ನುಣ್ಣಿತ್ತು + ಸರ (ದ್ಭ. ಸ್ವರ), ನುಣುಪಾದ ಧ್ವನಿ; ಶ. ದ. 179, ಶ. ದ. 68. ಅಲಂ-ಮನೋವ್ಯಥೆಯನ್ನು.

೩೨. ಪೊರೆದೋಱುವ-ಪೊರೆಯಂತೋಱುವ, ವಿಕಸಿಸುವ. ಕನ ರ್ಗೊನರ್-ಕನರಾದ ಕೊನರ್,-" ಅಪಕ್ವರಸ" ಶ. ದ. ಪಣ್ಗೊನೆ-ಹಣ್ಣು

ಗಳುಳ್ಳ ಕೊನೆ. ಸೋಲಿಸುಗುಂ-ಮೋಹಪಡಿಸುತ್ತದೆ. ಆವನಂ-ಯಾವನನ್ನೂ.

೩೩. ಇಂಚರ= ಇನಿದು+ಸರ, ಮಧುರಧ್ವನಿ. ನಲ್ಲರ-ಪ್ರಿಯರ. ನೀಳ್ದ-ದೀರ್ಘವಾದ. ಸೇದೆಯಂ ಸೆಳೆದು-ಶ್ರಮವನ್ನು ಹೋಗಲಾಡಿಸಿ. ಎಲರ್-ಗಾಳಿ.

೩೪. ವಿಳಸ-ದ್ಬ.ವಿಲಾಸ, ಮನೋಹರ.

೩೫. ಇಂಬಾದುದು--ಮನೋಹರವಾಯಿತು. ತಣ್ಗಂಪು= ತಣ್ಣಿತ್ತು+ಕಂಪು, ತಣ್ಣಗಿರುವ ವಾಸನೆ. ಎತ್ತಂ-ಎಲ್ಲಿಯೂ. ವಂಗಡ-ಗುಂಪು. ಜಾಣ್-ಜಾಣತನ. ಅರವೆಂಡಿರ್= ಅರಸು+ಪೆಣ್ಡಿರ್, ರಾಜಸ್ತ್ರೀ. ಪೊಗಳ್ವರ+ಓದಂ-ಸ್ತೋತ್ರವನ್ನು+ಕೇಳ್ವ+ಕೂರಾಳ್ಗಳಿಂ-ಭಟರಿಂದ.

೩೬. ಪಚ್ಚೆವರಲ್= ಪಚ್ಚೆ+ಪರಲ್, ಪಚ್ಚೆಯೆಂಬ ರತ್ನ: ಪರಲ್-ಕಲ್ಲು; ಪ್ರ. 'ಆಲಿವರಲ್' 'ಕೆಂಬರಲ್' ಹೊಸಗನ್ನಡದಲ್ಲಿ ಹರಳು, ಉ. ಸುಣ್ಣದ ಹರಳು. ಕುಳಿಸ-ದ್ಬ.ಕುಲಿಶ, ವಜ್ರ, ವಜ್ರವೆಂಬ ರತ್ನ. ನುಣ್ಗದಿರ್= ನುಣ್ಣಿತ್ತು+ಕದಿರ್, ನುಣುಪಾದ ಕಾಂತಿ. ಇಂದಿರವಿಲ್-ಇಂದ್ರಧನಸ್ಸು: ಇದನ್ನೇ ಕಾಮನ ಬಿಲ್ಲೆಂದೂ, ಮಳೆಯ ಬಿಲ್ಲೆಂದೂ ಕರೆಯುತ್ತಾರೆ. ಇಂದಿರ-ದ್ಬ.ಇಂದ್ರ. ಪಾಂಗು-ರೀತಿ. ಎನಸುಂ--ವಿಶೇಷವಾಗಿ. ಬಾಂಬಟ್ಟೆ= ಬಾನ್+ಬಟ್ಟೆ, ಅನ್ತರಿಕ್ಷ ಮಾರ್ಗ. ಸೋಲ-ಸೋಲ್ ಧಾತುವಿನ ಭಾವನಾಮ, ಮೋಹ. ರನ್ನವಸರ-ರತ್ನದ ಹಸರ, ರತ್ನಗಳ ಅಂಗಡಿ.

೩೭. ಸಂಕೆ-ದ್ಬ.ಶಂಕಾ, ಭ್ರಾನ್ತಿ. ಕಂಚು-ದ್ಬ.ಕಾಂಸ್ಯ.

೩೮. ಪೂಲಿ, ಮುಗರಿ, ದೋರಿ-ನೆಯ್ಗೆಯಲ್ಲಿ ಭೇದವುಳ್ಳ ಬಟ್ಟೆಗಳ ಮಾದರಿ. ಪಟಿ-ನಡುವಿಗೆ ಕಟ್ಟಿಕೊಳ್ಳುವ ಪಟ್ಟೆಯ ದಟ್ಟಿ. ತಳಿರ್ವಟ್ಟೆ-ಚಿಗುರಿನ ಹಾಗೆ ಕೆಂಪಾದ ಬಟ್ಟೆ. ಮಟಿಗೆ-ದ್ಬ.ಮಠಿಕಾ, ಅಂಗಡಿ. ಸೀರೆವರದರ್-ಸೀರೆಯ ಪರದರ್, ವ್ಯಾಪಾರಿಗಳು.

೪೦. ಎತ್ತೆ-ಧಿಕ್ಕರಿಸಲು. ಇರದೆ-ಅವ್ಯಯ; ಬಿಡದೆ, ಕೂಡಲೆ. ಸೆಳ್ಳುಗುರ್-ಸೂಕ್ಷ್ಮವಾದ ನಖ. ಕುತ್ತೆಸಳ್= ಕಿಱುದು+ಎಸಳ್; ಸ್ವರಾದಿಯಾದ ಉತ್ತರ ಪದದೊಡನೆ ಸಮಾಸವಾದಾಗ, 'ಕಿಱುದು' ಎಂಬ

ಪದಕ್ಕೆ 'ಕಿತ್ತು' 'ಕುತ್ತು' ಎಂಬ ಆದೇಶಗಳು ಬರುತ್ತವೆ. ಉ. ಕಿತ್ತಡಿ, ಕುತ್ತಡಿ, ಕಿತ್ತೀಳಿ. ಶ. ದ. 181. ಬಾಸಿಗ-ಬಾಸಿಂಗ, ತಲೆಯಲ್ಲಿ ಧರಿಸುವ ಹೂದೆಂಡೆ. ಎತ್ತು.—ಎರಡರ್ಥವೇನು?

೪೧. ಪುಲ್ಲವಡಿಗಿತಿ-ಹೂವಾಡಗಿತ್ತಿ.

೪೨. ಗರುವರ್-ದೊಡ್ಡವರು. ಗೊಟ್ಟಿ-ದ್ಭ.ಗೋಷ್ಠೀ. ಅಕ್ಕರಿಗ-ಅಕ್ಷರಜ್ಞ, ಪಂಡಿತ. ಸಂದ-ಪ್ರಖ್ಯಾತವಾದ; ಸಲ್ ಎಂಬುದರ ಭೂತರೂಪ; ಶ. ದ. 237. ಕಬ್ಬಿಗ-ಕವಿ. ಜೋಡೆ-ಸ್ವೈರಿಣಿ. ಬಂಡರ್-ಧಾರ್ಷ್ಟ್ಯವುಳ್ಳವರು; "ಬಂಡು ಧಾರ್ಷ್ಟ್ಯೇ" ಶ. ಶಾ. ವ್ಯಾ. ಒರೆಗಾಱರ್-ಚಿನ್ನದ ಒರೆಯನ್ನು ನೋಡುವವರು. ಅಗರ-ದ್ಭ.ಅಗಾರ, ಮನೆ. ಪೆಂಪು-ಪಿರಿದರಭಾವ.; "ಉನ್ನತಿ" ಚತುರಾಸ್ಯ.

೪೩. ತುಡು-ಧರಿಸು; ಇದೇ ಧಾತುವಿನಿಂದ ಹುಟ್ಟಿದ ನಾಮಪದ 'ತೊಡವು'-ಆಭರಣ. ಸೌರಿ-ದ್ಭ.ಶೌರಿ, ಕೃಷ್ಣ. ಅಟ್ಟಿದ-ಕಳುಹಿದ; ಪ್ರ. 'ಬಟಿಯಟ್ಟು.' ಚಂದ್ರಾದಿಗಳಿಗೂ ಕೂಡ ಆ ವೇಶ್ಯೆಯರು ಮೋಹಕರರಾಗಿದ್ದರೆಂದು ತಾತ್ಪರ್ಯ.

೪೪. ಇಟ್ಟಣ--ಶೋಭೆ; ಇದರ ರೂಪಾನ್ತರ, ಇಟ್ಟಳ. ಪೊಂಬೆಸೆವ-ಪೊನ್ನಬೆಸದ, ಚಿನ್ನದ ಕೆಲಸಮಾಡಿರುವ. ಬಿಸವಂದ-"ಬಿಸವಂದಮೆಂದು ವಿಸ್ಮಯಾರ್ಥಂ" ಚತುರಾಸ್ಯ. ಪಾರಿವ-ಪಾರಿವಾಳದ ಹಕ್ಕಿ. ಕವ್ವರೆಗೊಂಡು-ಮುತ್ತಿ. ವಂಗಡ-ಸಾಲು. ವಾರುವ-ಕುದರೆ. ಮೆಚ್ಚು-ಬಹುಮಾನ. ಮನ್ನೆಯ-ದ್ಭ.ಮಾನ್ಯ, ಗೌರವಸ್ಥ, ಯಜಮಾನ. ಸಾವಂತ-ದ್ಭ.ಸಾಮಂತ, ನೆರೆಹೊರೆಯ ಅಧೀನರಾಜ. ಪಸಾಯ್ತ-"ಪಡವಳ" ಚತುರಾಸ್ಯ. ತುಱಿಲಾಳ್-ವೀರ. "ಒಲ್ಬಂಟ ಸಭಿಕ" ಚತುರಾಸ್ಯ, ಅಡ್ಡಣ-"ಹರಿಗೆ" ಚತುರಾಸ್ಯ, ಗುರಾಣಿ. ಎಡ್ಡವಾಗೆ-"ಎಡ್ಡಮೆಂದು ಮನೋಹರಂ" ಕ. ನಿಘಂಟು. ಸೊವಡು-ಸೊಗಡು, ಕಟುವಾದ ವಾಸನೆ. ಮಸಗಿ-ನುಗ್ಗಿ, ಧಾ. ಮಸಗು-ಉಜ್ಜೃಂಭಣೇ. ವಿಸಟಂಬರಿದು-ಸ್ವೇಚ್ಛೆಯಾಗಿ ಓಡಿ, "ಬೀದಿವರಿದು" ಭಾರತನಿಘಂಟು. ಮನ್ನಣೆಯ-ಮರ್ಯಾದೆಗೆ ಅರ್ಹರಾದ, ಮಾನ್ಯರಾದ. ಮಾವಂತ-"ಹಸ್ತ್ಯಾರೋಹ, ನಿಷಾದಿ", ಮಾವಟಿಗ. ಗೆಂಟು-"ದೂರ" ಚತುರಾಸ್ಯ: "ಅತಿದೂರ" ಭಾರತನಿಘಂಟು. ಗೋಸ-

ದ್ವ. ಘೋಷ, ಶಬ್ದ. ಇಂದಿರನ ಪೊೞಲ್-ಅಮರಾವತಿ, ಸ್ವರ್ಗ. ಆ ಪಟ್ಟಣವು ಸರ್ವಸಂಪತ್ಸಮೃದ್ಧವೆಂದು ತಾತ್ಪರ್ಯ.

೪೭. ಎೞೆ-ದ್ವ. ಇಳಾ, ಭೂಮಿ. ನನ್ನಿ-ಸತ್ಯ. ಸರಣ್-ದ್ವ. ಶರಣ, ರಕ್ಷಕ. ಚಾಗ-ದ್ವ. ತ್ಯಾಗ, ದಾನ. ಎಸಕ-ಕೆಲಸ. ಅಲಂಪು-ಆಧಿಕ್ಯ; ಮತ್ತೊಂದರ್ಥ ಸಂತೋಷ. ತಕ್ಕರ್-ಯೋಗ್ಯರು; ಧಾ. ತಗು--ಈ ಧಾತುವಿಗೆ ಹೊಸಗನ್ನಡದಲ್ಲಿ ಪ್ರಯೋಗವಿಲ್ಲ; ಆದರೆ ತಕ್ಕದ್ದು.' 'ತಕ್ಕ' ಎಂಬ ರೂಪಗಳು ಮಾತ್ರ ಪ್ರಚಾರದಲ್ಲಿವೆ. ಬಲದೋಳ್ದಲೆ-ದಕ್ಷಣಭುಜಶಿರಸ್ಸು.

೪೭. ಸಲೆ--(ಅವ್ಯಯ) ಹೆಚ್ಚಾಗಿ. ಇರ್ಕೆವನೆ--ವಾಸದಮನೆ. ಉಗ್ಗಡ-ದ್ವ. ಉತ್ಕಟ. ಅಧಿಕ.

೪೮. ಸೋಲಿಪುವು-ಜಯಿಸುವುವು, ಮೋಹಪಡಿಸುವುವು. ಅಡಸಿ-ಬಲಾತ್ಕಾರದಿಂದ ಪ್ರವೇಶಿಸಿ. ಮುಗುಳ್ಗಣೆ-ಪುಷ್ಪಬಾಣ. ಮೊನೆ-ಯುದ್ಧ.

೪೯. ಪಡಿಮೊಗ—ದ್ವ. ಪ್ರತಿಮುಖ, ಅಭಿಮುಖ; ಪ್ರ. "ಪಡಿಮೊಗಮಾದಾ ಬಿದಿಯಾ| ಯೆಡೆಯಿಂ ತದೀಗುಮೆೞಸಿದರ್ಥಮನುೞಿದಿಂ" ಮಿತ್ರವಿಂದಾಗೋವಿಂದ. ಬಾಳ್-ಕತ್ತಿ; "ಬಾಳ್-ಜೀವನೇ; ಖಡ್ಗೇಕುಳಂ" ಶ. ದ. ಪು. 331.

೫೦. ಕಡುಗಲಿ-ಮಹಾಬಲಶಾಲಿಯಾದ. ಬೆಳ್ಗೊಡೆ-ಶ್ವೇತಚ್ಛತ್ರ; ಅರ್ಥಾಂತರ ಹೀನವಾದ ಕೊಡೆ; ಪ್ರ. "ಬೆಳ್ಳಕ್ಕರಿಗ"= ಅರಸಿಕ, "ಬೆಳ್ಪ"=ಬೆಪ್ಪ. ಅಣಂಬೆ-ಅಣಬೆ, ನಾಯಿಕೊಡೆ. ಮನ್ಮಥನು ರಾಜಾಧಿರಾಜನಾಗಿದ್ದನೆಂದು ತಾತ್ಪರ್ಯ.

೫೧. ಸಿರಿ-ಐಶ್ವರ್ಯ; ಕಾಂತಿ; ಲಕ್ಷ್ಮಿ; ಪೊಡೆಯಲರ-ಪದ್ಮನಾಭ. ಕಾಯ್ಪು-ಪರಾಕ್ರಮ; ಕ್ರೌರ್ಯ; ಔಷ್ಣ್ಯ. ಬಿಸುಗದಿರ-ಸೂರ್ಯ. ಸರ-ಬಾಣ: ಹಾರ. ಅೞವಟ್ಟಂ- ಇಲ್ಲಿ ಕೂಡಿಕೊಂಡಿದ್ದಾಗ್ಯೂ. ಪಾರ್ವರ್-ಬ್ರಾಹ್ಮಣರು, ಹೊಸಗನ್ನಡ, ಹಾರುವರು. ಮಡ-ದ್ವ. ಮಠ-ಪಾಠಶಾಲೆ, ಕಡಾಣಿ, ಶ. ಶಾ. 315 ವ್ಯಾ. ಬಾನ್-ಆಕಾಶ. ಮೀನ್-ಧ್ವಜದಲ್ಲಿರುವ ಮತ್ಸ್ಯ, ನಕ್ಷತ್ರ, ಮೀನು. ಕೋಡುಗೈ-ಕೋಡಿನ ಕೈ-ದಾನದ ಕೈ; ಶಾಖೆ; ಸೊಂಡಲಲ್ಲಿಟ್ಟುಕೊಂಡಿರುವ ಶಾಖೆ.

೫೨. ಬಗ್ಗಿಪ-ಧ್ವನಿಮಾಡುವ, ಕೂಗುವ.

೫೩. ತಾಱೆ-ಕಾರ್ಶ್ಯವನ್ನು ಹೊಂದಲು, ಪಗಲಾಣ್ಮ-ದಿನೇಶ, ಸೂರ್ಯ. ಚೆಚ್ಚರ-ವೇಗ. ಅಱೆ-ಬಣಗಿ ಹೋಗಲು. ಅದಿಮೂರ್ತ್ತಿ-ವಸಂತದೂತಿಯೆಂಬ ಲತೆ. ಪೇಱೆ-ಪೊತ್ತಿರಲು ; ಹೊಸಗನ್ನಡ, ಹೇರು.

೫೪. ಕಿಱುವೆಟ್ಟು=ಕಿಱಿದು+ಬೆಟ್ಟು, ಗುಡ್ಡ. ಬೊಬ್ಬುಳಿ-ದ್ಭ. ಬಬ್ಬೂರ, ಗೊಬ್ಬಳೀಮರ. ಸಿರಿಕಂಡ-ದ್ಭ. ಶ್ರೀಖಂಡ, ಗಂಧ. ಒಕ್ಕ-ಧಾ. ಉಗು, ವಿಸರ್ಜನೇ. ಕಿಬ್ಬರಿ=ಕೆಳಗು+ಬರಿ, ಪರ್ವತಪ್ರಾಂತ ; ಹೊಸಗನ್ನಡ, ಕಿಬ್ಬರಿ. ಅಸುಗೆ-ದ್ಭ. ಅಶೋಕ. ಪೊಂಪುಳಿ-ಅಧಿಕ ; ಮತ್ತೊಂದರ್ಥ ಪುಳಕ. ನಿಱುಗಱುಗಂಪು-ಒಂದು ವಿಧವಾದ ಆಟ. ದೂರಿಸುವ- "ದೂರಿಸಿದನೆಂದು ಸಲೆ ಚಿಂತಿಸಿದನಕ್ಕುಂ" ಕರ್ಣಾಟಕ ನಿಘಂಟು. ೩೭. ಸೀಱೆ-ಸುಂದರಸ್ತ್ರೀ. ನಿಡುಸುಯ್‌=ನಿಡಿದು+ಸುಯ್‌, ದೀರ್ಘವಾದ ಶ್ವಾಸ. ಬಟ್ಟ-ಗುಂಡಗಿರುವ ; ಪ್ರ. "ಬಟ್ಟಮೊಗ" ; ಬಟ್ಟಿತು ಎಂಬ ಗುಣವಚನಕ್ಕೆ ಸಮಾಸದಲ್ಲಿ 'ಬಟ್ಟ' ಎಂಬ ಆದೇಶ ಬರುತ್ತದೆ. ತೋರಮುತ್ತಿನಾರ-ಸ್ಥೂಲಮುಕ್ತಾಹಾರ ; ಆರ-ದ್ಭ. ಹಾರ. ಕಲವೆ-ದ್ಭ. ಕಲಮಾ, ನೆಲ್ಲಗದ್ದೆ. ಪಾಱುಬೊಜಂಗ=ಪಾಱುವ+ಬೊಜಂಗ (ದ್ಭ. ಭುಜಂಗ), ಚಂಚಲನಾದ ವಿಟ. ಗೆಯ್ತ-ವ್ಯಾಪಾರ, ಕೆಲಸ.

೫೫. ಬಿರಯಿ-ದ್ಭ. ವಿರಹಿ. ಪೋ-ಪೋಗು ; ಪ್ರ. "ಪೋ ಮಾಣೆನ್ನನ್ಯಕವಿಸ್ತುತಿವ್ಯಸನಮಂ" ಕಾದಂಬರಿ, ೩. ಡೌಡೆ ವಾದ್ಯ ವಿಶೇಷ. ಮಿಡಿ-ಹೀಚುಕಾಯಿ.

೫೬. ಪಾದರಿ--ದ್ಭ. ಪಾಟಲ. ಕಾಡುವ--ತೊಂದರೆಪಡಿಸುವ ; ಇದರ ಭಾವನಾಮ, ಕಾಟ. ಇರ್ಕುಳಿಗೊಂಡುವು-ಸೆಳೆದುಕೊಂಡುವು.

೫೭. ಕಾಪಂ-ರಕ್ಷಣೆಯನ್ನು. ಅವಿದತ್ತು-ಮುತ್ತಿಕೊಂಡುವು.

೫೮. ನಡೆವಳಿಗೆ-ನಡತೆಯನ್ನು, ಪದ್ಧತಿಯನ್ನು ; ಇಲ್ಲಿ ದ್ವಿತೀಯಾರ್ಥದಲ್ಲಿ ಚತುರ್ಥಿ.

೫೯. ನಿಮಿರ್ದ-ದೀರ್ಘವಾದ. ಅಣಂ-'ಏನುಮೆನಿಪ್ಪರ್ಥಮನಿರ| ದಾನಿಪರಣಮಾಣಮೆಂದು ನುಡಿವವ್ಯಯದೊಳ್.' ಶ. ದ. 303 ಅಱಿಡಿ-ಷಟ್ಚರಣ, ಭ್ರಮರ. ಅರಡಿ-ತೊಂದರೆ.

೬೦. ಬಂಡು-ಮಕರಂದ ; ಪ್ರ. ' ಬಂಡುಣಿ '-ಭ್ರಮರ. ಮೆಲ್ಸರಿ= ಮೆಲ್ಲಿತು+ಸರಿ, ಸೋನೆ.

೬೧. ಎಱುಯೆ-ಯಾಚಿಸಲು. ಗಾಣರ್-ದ್ಬ.ಗಾಯನರ್, ಗಾಯಕರು ; ಪ್ರ. " ಅಮರರಗಾಣರ್ | ಪಾಡುವರೆನೆ " ಅಜಿನಾಥ ಪುರಾಣ. ಆ ೫.

೬೨. ಬಿಣ್ಪು-ಭಾರ: ಇದು ಬಿಣ್ಣಿತು ಎಂಬುದರ ಭಾವನಾಮ, ಪ್ರ. " ಕಣ್ಮಲರ್ಗೆ ಕಾಡಿಗೆ ಬಿಣ್ಣಿತು " ಕಾದಂಬರಿ, ಗುಜ್ಜು-ದ್ಭ. ಕುಜ್ಜ, ಚಿಕ್ಕದಾದ. ತನಿವಣ್= ತನಿತು+ಪಣ್, ಪಕ್ವವಾದ ಹಣ್ಣು, ಪ್ರ. ' ತನಿಗೆಂಡ, ' ' ತನಿವೇಸಗೆ. ' ಅಳ್ಳಿಗೊಂಬು-ಕ್ಷುದ್ರಶಾಖೆ.

೬೩. ಸುಗ್ಗಿ-ವಸಂತಕಾಲ. ತಳ್ವಿದಂ-ಸಾವಕಾಶಮಾಡಿದನು. ನಲ್ಲಂ-ಪತಿ.

೬೪. ಚೆನ್ನೆ-ಸುಂದರಸ್ತ್ರೀ. ಮೆಯ್ಗರೆದ-ಮರಸಿಕೊಂಡ.

೬೫. ಕಿನಿಸಿದಪೆ-ಕೋಪಿಸಿಕೊಳ್ಳುತ್ತೀಯೆ. ಕಾದಲನಿಲ್ಲದ ಪೆಱಗೆ-ಪ್ರಿಯನು ಇಲ್ಲದ ವೇಳೆಯಲ್ಲಿ.

೬೬. ತಲ್ಲಣ-ಭಯ.

೬೭. ಕೋಡುವ-ಶೀತಳವಾದ; ಧಾ. ಕೋಡು ಶೈತ್ಯೇ. ಕೊಂಚೆ-ದ್ಬ.ಕ್ರೌಂಚ. ಮೂಡುವ-ಉದಯಿಸುವ. ಅಗಿವಳ್-ಧಾ.ಅಗಿ, ಭಯೇ.

೬೮. ಒರ್ಸರ= ಒಂದು+ಸರ, ಏಕಾವಳಿ. ಚುನ್ನವಾಡೆ-ನಿಂದಿಸಲು ; ' ನಿಂದೆ ಚುನ್ನಮೆಲೆ ಚತುರಾಸ್ಯ ' ಸೆಳೆಮಾವು= ಸೆಳೆಯಂತಪ್ಪ ಮಾವು, ಬೆತ್ತದಹಾಗೆ ಸಣ್ಣಗಿರುವ ಮಾವು. ತುಂಬಿವಾಡಂ-ತುಂಬಿಯ ಪಾಡಂ, ಭೃಂಗಗೀತವನ್ನು.

೭೦. ಪಂದರ-ಚಪ್ಪರ. ಮೆಯ್ವೆಂಕೆ-ಮೆಯ್ಯ ಬೆಂಕೆ, ಶರೀರ ತಾಪ. ಪತ್ತೆಸಾರ್ದು-ಹತ್ತರ ಹೋಗಿ.

೭೧. ತಳ್ವಿಲ್ಲದೆ-ತಳ್ವು+ಇಲ್ಲದೆ, ಸಾವಕಾಶಮಾಡದೆ. ತಿಳಿಪಿ-ಇಲ್ಲಿ ಸಮಾಧಾನಪಡಿಸಿ. ಆಗಳುಂ-ಯಾವಾಗಲೂ, ಸರ್ವದಾ.

೭೨. ನಗೆಗಾಱ-ಹಾಸ್ಯಗಾರ, ವಿದೂಷಕ. ಇಟ್ಟೆಡೆಯಂ ತೊಲಗಿ ಪೋಗೆ-ದೊಂಬಿಯಾಗದಹಾಗೆ ಹೊರಟುಹೋಗಲು. ಕೆಲ-ಪಾರ್ಶ್ವ.

೭೩. ಕವರ್ವಂತೆ-ಅಪಹರಿಸುವ ಹಾಗೆ, ಇಂದಿನ-ಇಂದು ಎಂಬುದರ ಷಷ್ಠಿ, ಈ ದಿನದ.

೭೪. ನಿಟ್ಟೆಸಳ್= ನಿಡಿದು+ಎಸಳ್, ದೀರ್ಘವಾದ ಕಮಲದ ಎಸಳು; ನಿಡಿಯ ಮೆಲ್ಲಡಿ= ನಿಡಿದು+ಮೆಲ್ಲಡಿ. 'ನಿಡಿದು' ಎಂಬ ಗುಣ ವಾಚಕವು ಸ್ವರಾದಿಯಾದ ಪದದೊಡನೆ ಸಮಾಸವಾದಾಗ ನಿಟ್ಟೆಂದೂ, ವ್ಯಂಜನಾದಿಯಾದ ಪದದೊಡನೆ ಸಮಾಸವಾದಾಗ 'ನಿಡು' ಅಥವಾ 'ನಿಡಿಯ' ಎಂದೂ ಆಗುತ್ತದೆ. ಉ. ನಿಡುದೋಳ್. ನೆನೆಯಿಸಿದುದು-ಜ್ಞಾಪಿಸಿತು, ಸಮಾನವಾಗಿತ್ತೆಂದು ಭಾವ.

೭೫. ನೇರಿತು-ಸರಳವಾದ. ಓರಂತೆ-ಏಕರೂಪವಾದ, ಅದರ ಹಾಗೆ ಇರುವ. ಬಾರಿಸಿ-ಧಿಕ್ಕರಿಸಿ. ತೋರಣಗಂಬ-ತೋರಣವನ್ನು ಕಟ್ಟುವುದಕ್ಕೋಸ್ಕರ ನೆಟ್ಟ ಕಂಬ.

೭೬. ತೆರೆ-ಅಲೆ. ಪೊಕ್ಕುೞ್-ನಾಭಿ; ಹೊಸಗನ್ನಡದಲ್ಲಿ ಹೊಕ್ಕುಳು. ತೆಳ್ವಸಿಱ್= ತೆಳ್ಳಿತ್ತು+ಬಸಿಱ್, ಕೃಶೋದರ. ತಿವಳಿ-ದ್ಬ. ತ್ರಿವಳಿ.

೭೭. ಕುರುಳ್-ಕೂದಲು.

೭೮. ಪೊಱವಾಱ್-ಜಘನ. ಆರ್ತುವಿಲ್ಲ-ಸಾಮರ್ಥ್ಯವುಳ್ಳವುಗಳಾಗಿಲಿಲ್ಲ. ಕಡುಗುಣ್ಪನಾಳ್ದ-ಬಹಳ ಆಳವಾದ; ಗುಣ್ಪು-ಆಳ. ಅೞ್ದ-ಮುಳುಗಿದ, ಧಾ. ಅೞ್ ನಿಮಗ್ನೇ. ಶ. ಶಾ. 478. ಬಾಸೆ-ರೋಮಾವಳಿ. ಬೆಟ್ಟಿತಪ್ಪ-ಕಠಿನವಾದ. ಕಪ್ಪು-ಆನೆ ಮೊದಲಾದ ಮೃಗಗಳನ್ನು ಹಿಡಿಯುವುದಕ್ಕೆ ತೋಡಿದ ಹಳ್ಳ. ಎಱಕ-ಪ್ರೀತಿ. ಪೆಱನೊಸಲ್= ಪೆಱೆಯಂತೆ-ಚಂದ್ರನಂತೆ, ಮನೋಹರವಾದ, ನೊಸಲ್-ಹಣೆ. ಬಳ್ಳಿಗುರುಳ್-ಬಳ್ಳಿಯಂತೆ ಸುರಳಿಸುರಳಿಯಾಗಿರುವ ಕುರುಳು. ಕಣ್ಣೆವಲೆ-ಕಣ್ಣಿಯ ಬಲೆ, ಹಗ್ಗದ ಬಲೆ. ಕೆಡೆದ-ಬಿದ್ದ. ಎರಲೆ-ಹುಲ್ಲೆ.

೭೯. ಸುಲಿಪಲ್= ಸುಲಿದ+ಪಲ್, ಬೆಳಗಿದ ಹಲ್ಲು; ಪ್ರ. "ವನಿತೆ ವಿಳಾಸದಿಂ ಸುಲಿದ ದಂತಚಯಂ" ಅಲರ್ಗಣ್-ಅಲ

ರಂತಪ್ಪ ಕಣ್. ತಿಸರ-ದ್ಭ.ತ್ರಿಸರ, ಮೂರೆಳೆಯ ಹಾರ. ಪಾಲ್ಗಡಲ ಪೆರ್ದೆರೆಯೊಳ್-ಎಂದು ವಿಶೇಷಿಸುವಲ್ಲಿ ಕವಿಯ ಭಾವವೇನು ?

ಇದು ಆ ಸುಂದರಿಯ ಅವಯವಸೌಷ್ಟವ ಸೌಂದರ್ಯ ವರ್ಣನೆ. ಕವಿಯು ಇಲ್ಲಿ ಪ್ರಕಾರಾಂತರವಾಗಿ ಎಂದರೆ ವ್ಯಂಗ್ಯಮರ್ಯಾದೆಯಲ್ಲಿ ಕಣ್ಣಿನ ವರ್ಣನೆಯ ಮೂಲಕ ಮಾಡಿರುತ್ತಾನೆ. ಅವಳ ಶರೀರದ ಭಾಗಗಳು ಹೀಗೆ ಹೀಗೆ ಇವೆ ಎಂದು ಸ್ಪಷ್ಟವಾಗಿ ಹೇಳದೆ, ಊಹಿಸಿದರೆ ತಿಳಿದು ಬರುವಂತೆ ಮಾಡಿ, ತನ್ನ ಪ್ರತಿಭೆಯನ್ನು ತೋರಿಸಿಕೊಂಡಿದ್ದಾನೆ.

೮೦. ಪುತ್ತಳಿ-ದ್ಭ.ಪುತ್ರಿಕಾ, ಬೊಂಬೆ. ಬಿದುಗಲ್ಲು-ಚಂದ್ರಕಾಂತಶಿಲೆ; ಬಿದು-ದ್ಭ.ವಿಧು; ಕಲ್ ಎಂಬ ಶಬ್ದಕ್ಕೆ 'ಕಲ್ಲು' ಎಂಬ ರೂಪಾಂತರವುಂಟೆಂದು ಶಬ್ದಾನುಶಾಸನದಲ್ಲಿ ಹೇಳಿದೆ. ಪಾಂಗು-ರೀತಿ. ಸೊಂಪಳವಡೆ-ಸೌಂದರ್ಯವುಂಟಾಗುವ ಹಾಗೆ. ಪೂಸರ-ದ್ಭ.ಪುಷ್ಪಶರ, ಮನ್ಮಥ.

೮೧. ಇಂಬೆನೆ-ಮನೋಹರವಾಗಿರುವ ಹಾಗೆ. ಕೈಮಿಗೆ-ಹೆಚ್ಚಾಗಲು.

೮೨. ಬಿತ್ತಿ-ದ್ಭ.ಭಿತ್ತಿ, ಗೋಡೆ. ಬಚ್ಚಿಸಿದ-ಬಣ್ಣಹಾಕಿದ; ಭಾವನಾಮ, ಬಚ್ಚಣೆ.

೮೩. ಬೇಟಂಗಳುಮಂ ತಳೆದು, ಇಂಚರದಿಂ ಬಗೆಗೊಳಿಪ, ಅಂಚೆಯ ನೆರವಿಗಳಂ ನೋಡು, ಎಂದು ಅನ್ವಯ. ನೆರವಿ-ಗುಂಪು.

೮೪. ಪರಿತರ್ಪ-ಬರುವ. ಬಂಡು-ಮಕರಂದ. 'ನೋಡು' ಎಂಬ ಕ್ರಿಯೆಯನ್ನು ಅಧ್ಯಾಹಾರಮಾಡಿಕೊಳ್ಳಬೇಕು.

೮೮. ಮಾಂಗಾಯ್-ಮಾವಿನ ಕಾಯ್; ಮಾವು ಶಬ್ದವು ಪೂರ್ವಪದವಾಗಿ ಉತ್ತರಪದವು ಮಕಾರಾದಿಯಾಗಿದ್ದರೆ ಸಮಾಸದಲ್ಲಿ ಬಿಂದು ಬರುವುದಿಲ್ಲ. ಉ.ಮಾಮರ. ಮಾಮುಗಳ್, ಮಾಮಿಡಿ. ಶ.ಶಾ. 332 ವ್ಯಾ. ಪೊಚ್ಚ-ನೂತನವಾದ; ಅರ್ಥಾಂತರ, ನದಿ. ಪೊಂಗಿರ್ದ-ಸಂತೋಷದಿಂದ ಉಬ್ಬಿದ. ಇಂಗೋಲ್= ಇನಿದು+ಕೋಲ್, ಕಬ್ಬು. ಪಣ್ತ-ಧಾ ಪಣ್-"ಫಲಪರಿಪಾಕೇ, ನಿಯೋಗೇಚ" ಶ. ಶಾ|| 474, 475; ಇದಕ್ಕೆ ಭೂತದಲ್ಲಿ ಎರಡು ರೂಪ, 'ಪಣ್ತ'= ಫಲಿಸಿದ, 'ಪಣ್ಣಿದ'= ಮಾಡಿದ. ತೋಂಟಿಗ-ತೋಟಗಾರ

೮೯. ಬನ್ನ-ದ್ಬ. ಭಗ್ನ. ಕಿನ್ನ-ದ್ಭ. ಖಿನ್ನ. ಪೊಡರ್ಪು-ಪ್ರತಾಪ; ಧಾ. ಪೊಡರ್ ಸ್ಫುರಣೇ. ಉಡುಗಿದ-ನಾಶವಾದ; ಧಾ. ಉಡುಗು, ಸಂಕೋಚನೇ. ನಗು-ಇಲ್ಲಿ ಸಕರ್ಮಕ, ಅಪಹಾಸ್ಯಮಾಡುವ ಎಂದರ್ಥ; ಪ್ರ. "ಪಾಂಥರಂ ನಗುವ ಹರ್ಮ್ಯಾಗ್ರದಬ್ಜಾಕ್ಷಿಯರ್" ರಾಜ. ಆ|೮. ಮಲೆವ-ಪ್ರತಿಭಟಿಸುವ; ಧಾ. ಮಲೆ, ಔದ್ಧತ್ಯೇ. ಮುಳಿವರಸರ್-ಪ್ರತಿ ರಾಜರು, ಶತ್ರುರಾಜರು; ಪ್ರ. "ಮುಳಿಮುನಿ" "ಮುಳಿವಾತು." ನೆತ್ತರ್-ರಕ್ತ. ಬಾಳ್-ಕತ್ತಿ ಪೂತ್ತಿ-ಹೊಸಗನ್ನಡದ ರೂಪ, ಹತ್ತಿ. ನೆರವಿಲ್ಲದೆ-ಇತರ ಸಹಾಯಾಪೇಕ್ಷೆಯಿಲ್ಲದೆ; ನೆರಂ-ಸಹಾಯ, ಇದರ ಪೂರ್ಣರೂಪ, ನೆರವು. ಕೊಸಗು-ಬೆಟ್ಟದಾವರೆ. ಕದಪು, ಕದಂಪು-ಕೆನ್ನೆ. ಬಕುಳ-ದ್ಬ. ವಕುಳ. ಬಿನದ-ವಿನೋದ. ಪಕ್ಕಾದ-ಆಶ್ರಯವಾದ; ಪ್ರ. "ತನಯಂ ತಪಕ್ಕೆ ಪಕ್ಕಾಗಲೊಡಂ" ಪಂಪ ರಾಮಾಯಣ ಆ. ೬.

ಈ ಪದ್ಯದಲ್ಲಿ ವನದ ಸೊಗಸನ್ನು ವರ್ಣಿಸುವ ವ್ಯಾಜದಲ್ಲಿ ರಾವನ ಪ್ರತಾಪಾದಿಗಳು ವರ್ಣಿಸಲ್ಪಟ್ಟಿವೆ.

೯೦. ಜಡಿವ-ಗದ್ದರಿಸುವ. ಪಡಿಯಱ-ದ್ಬ. ಪ್ರತೀಹಾರ, ಆಳು. ಉಜ್ಜುಗ-ದ್ಭ ಉದ್ಯೋಗ.

೯೧. ಸೀಗುರಿ-ಒಂದು ವಿಧವಾದ ಚಾಮರ; ಪ್ರ. "ಧವಳವಿಲೋಚನಂ ಧವಳಚಾಮರ ಮಾಗೆ....ಅಳಕಜಾಳಮೆ ಸೀಗುರಿಯಾಗೆ" ಅಜಿತನಾಥಪುರಾಣ ಆ. ೫. ಮಿಳಿರ್ದಾಡೆ-ಅಲ್ಲಾಡಲು. ಗೋಸಣೆವೆತ್ತ-(ದ್ಬ. ಘೋಷಣ.) ಪ್ರಸಿದ್ಧರಾದ. ದೂಸರ-ದ್ಬ. ಧೂಸರ, ಬೂದಿಯಬಣ್ಣ. ದೇಸೆ-ಸೌಂದರ್ಯ. ಚೊಲ್ಲೆಯ-"ತುಱುಬಿನ ಕೊನೆ" ಶಬ್ದಸಾರ. ತಳರ್ದಂ-ಹೊರಟನು.

೯೨. ಸೋರ್ಮುಡಿ-ದೀರ್ಘವಾದ ಕೇಶಪಾಶ. ಸೋಗೆ-ನವಿಲು; ಅರ್ಥಾಂತರ ನವಿಲುಗರಿ. ಪೊಣರ್ವಕ್ಕಿ-ಕೋಕಪಕ್ಷಿ. ದೊರೆಗೊಂಡುವು-ಸಮವಾದುವು; ದೊರೆ-ಸಮ. ದಾಟಿಡುವವೋಲ್-ಮುತ್ತಿಗೆ ಹಾಕುವ ಹಾಗೆ; ಪ್ರ. "ವಜ್ರಿಗೆ ತಲ್ಲಣವಾಗೆ ದಿವಕೆ ದಾಟಿಯುನಿಟ್ಟೈ" ಪಂಪ ರಾಮಾಯಣ ೧೪. ಆ. ಕಡುಮುಳಿಯುತ್ತುಂ-ಏಕೆ?

೯೩. ಕುಡಿಮಿಂಚು-ಬಳ್ಳಿಯ ತುದಿಯಂತೆ ವಕ್ರವಾದ ಮಿಂಚು. ಕೇಸಡಿ= ಕೆಚ್ಚನೆ+ಅಡಿ. ಶ.ದ. 182. ಇಂಗೋಲವಿಲ್-ಕಬ್ಬಿನ ಬಿಲ್ಲು. ಕೈಮಿಕ್ಕು-ಹೆಚ್ಚಾಗಿ.

೯೫. ಎಡೆಗಿಱುವ-ಎಡೆಬಿಡದೆ ತುಂಬಿಕೊಂಡಿರುವ. ಬಿಂಕಗಾರ್ತಿಯರ್-ಯೌವನಗರ್ವಿತೆಯರು. ಆರೆಬರ್-ಕೆಲವರು.

೯೬. ಇಸಲ್-ಹೊಡೆಯಲು. ಒಡರಿಸು-ಯತ್ನಿಸು. ಜೇವೊಡೆ= ಜೇ(-ದ್ಭ.ಜ್ಯಾ)+ಪೊಡೆ, ಧನುಷ್ಟಂಕಾರ. ನೇವುರ-ದ್ಭ. ನೂಪುರ, ಕಾಲ ಅಂದಿಗೆ. ಚೆಲ್ಲಗಾರ್ತಿ-"ಸರಸವತಿ" ಶಬ್ದಸಾರ.

೯೭. ಪೀಲಿವಱೆ= ಪೀಲಿ+ತಱೆ, ನವಿಲುಗರಿಯ ಕೊಡೆ.

೯೮. ಮಾಮಿಡಿ-ಪೂವಿನ ಹೀಚುಕಾಯಿ. ಸೆಂಡು. ಹೊಸಗನ್ನಡ ಚೆಂಡು. ಸೊನೆ-ಸೋನೆ. ಬಟಿಯಂ-ಅನಂತರ. ಡಂಗುರಂಬೊಯ್ಸುತುಂ-ಸಾರುತ್ತಾ. ತಣ್ಗಾಳಿ-ತಣ್ಣಿತು+ಗಾಳಿ, ತಣ್ಣಗಿರುವ ಗಾಳಿ.

೯೯. ಮೆಲ್ಸೋಂಕು= ಮೆಲ್ಲಿತು+ಸೋಂಕು, ಮೃದುಸ್ಪರ್ಶ. ಬೆಮರ್-ಬೆವರು. ಜಡಿಪು-ಚಪ್ಪರಣೆ. ಎಡೆಗೊಳೆ-ವ್ಯಾಪಿಸಲು.

೧೦೦. ಪಡ್ಡಳಿ-"ಕಣಿಗಿಲೆ" ಶಬ್ದಸಾರ.

೧೦೧. ಸಂತೆ-ದ್ಭ. ಸಂಸ್ಥಾ, ಗುಂಪು, ಪೆಸರ-ಪ್ರಸಿದ್ಧವಾದ. ತೋರವೆಟ್ಟು= ತೋರಿತು-ಸ್ಥೂಲವಾದ +ಬೆಟ್ಟ. ಎಸಕಮಂ-ಚೆಂದವನ್ನು. ಎಣೆ-ಸದೃಶ.

೧೦೨. ಗುಡಿಗಟ್ಟು-ಧ್ವಜವನ್ನು ಸ್ಥಾಪಿಸುವುದು. ಗುಡಿ-ಧ್ವಜ; ಪ್ರ.ಪಂ. ರಾಮಾಯಣ. ಆ.೩.೧೧೪. ನೆರೆದು, ತಳೆದು-ಇವು ಮಲ್ಲಿಗೆ ಎಂಬುದರಲ್ಲಿ ಅನ್ವಯಿಸುತ್ತವೆ.

೧೦೩. ಎಲೆವಳ್ಳಿಗಳ್-ಕರ್ತೃಪದ. ತರತರದಿಂ-ಕ್ರಮವಾಗಿ. ನೇರ್ಪಡೆ-ಸೇರಿಕೊಳ್ಳಲು; ಧಾ. ನೇರ್ಪಡು, ಸಂಶ್ಲೇಷೇ.

೧೦೪. ಬಿಟ್ತು-ಹೊಸಗನ್ನಡ ಬಿತ್ತು.

೧೦೬. ಬೆಳೆವೆಣ್ಗಳ+ಅಂದದೆ= ಸೂಳೆಗಳ ಸೌಂದರ್ಯದಿಂದ.

೧೦೭. ಇಟ್ಟಣಿಸಿದ-ಮನೋಹರವಾದ. ಕಟ್ಟುದ್ದ= ಕಡಿದು+ಉದ್ದ. ಬಹಳ ಎತ್ತರ; ಪ್ರ. "ತೆಂಗಿನ ಮರವೆಷ್ಟುದ್ದ." ಎಱೆವೆಟ್ಟು-"ದಿಣ್ಣೆ" ಚತುರಾಸ್ಯ.

೧೦೮. ಎನಸುಂ-"ಪಿರಿದುಂ, ನಾಡೆ, ನಡೆ, ಅಳುಮ್ಬಂ, ಕರಂ, ಆದಂ, ಉಂ, ಅತಿ" ಚತುರಾಸ್ಯ. ಪರಿವಡೆದ= ಪರಿಯಂ ಸೌಂದರ್ಯವನ್ನು ಪಡೆದ ಹೊಂದಿದ; ಮನೋಹರವಾದ.

೧೦೯. ಪಳಿಕು-ದ್ಬ. ಸ್ಫಟಿಕ. ಸಱಿ-ಕಲ್ಲಿನ ಚಪ್ಪಡಿ; ಪ್ರ. "ಪಾಂಡುಕಶಿಲಾತಳಂ ಸೊಗಯಿಸುಗುಂ | ಆಸಱಿಯ ಮಧ್ಯದೊಳ್ ಸಿಂ | ಹಾಸನಂ" ಮಲ್ಲಿನಾಥಪುರಾಣ ಆ. ೧೨

೧೧೦. ಪರಿವಿಡಿ-ಕ್ರಮ. ತೊನೆಯುತ್ತೆ-ತಲೆಯನ್ನು ಅಲ್ಲಾಡಿಸುತ್ತಾ. ಕೆಱೆದೆಡೆಯಂ-ಸ್ಥಾನವಾಚಕ ಕಾಲವಾಚಕಗಳಾದ ನಾಮಪದಗಳನ್ನು ದ್ವಿತೀಯೆಯಲ್ಲಿ ಪ್ರಯೋಗಿಸುವುದುಂಟು. ಉ. 'ಒಂದು ಗಾವುದಮುಂ ಪರಿದಂ.' 'ಒಂದು ಜಾವಮಮಂ ತೊಳಲ್ದಂ' ಶ ದ. 128

೧೧೧. ಬಲುಗಾಯ್=ಬಲ್ಲಿತು+ಕಾಯ್. ಇದು ಹಳಗನ್ನಡ ವ್ಯಾಕರಣದ ಪ್ರಕಾರ 'ಬಲ್ಗಾಯ್' ಎಂದಾಗಬೇಕು. ಹೀಗೆ ಸಂಯುಕ್ತಾಕ್ಷರಗಳ ಮಧ್ಯದಲ್ಲಿ ಇಗಾಗಮ ಉಗಾಗಮಗಳನ್ನು ಮಾಡಿ, ಎರಡು ಅಕ್ಷರಗಳನ್ನಾಗಿ ಮಾಡುವ ಪದ್ಧತಿಯು ಪೂರ್ವದಲ್ಲಿ ವಿರಳವಾಗಿದ್ದು ಸುಮಾರು ಐದುನೂರು ಆರುನೂರು ವರ್ಷಗಳಿಂದೀಚೆಗೆ ಭಾಷೆಯಲ್ಲಿ ನೆಲೆಗೊಂಡಂತೆ ತೋರುತ್ತದೆ. ಷಟ್ಪದಿಗಳಲ್ಲಿಯೂ, ದಾಸರ ಕೀರ್ತನೆ ಮೊದಲಾದ ಈಗಿನ ಕಾವ್ಯಗಳಲ್ಲಿಯೂ ಈ ಪ್ರಯೋಗವು ವಿಶೇಷವಾಗಿರುವುದು. ಉ. ತಳಿರ್ಗೆ, ತಳಿರಿಗೆ; ಬಾಳ್ವಂ, ಬಾಳುವನು; ಅವಂಗೆ, ಅವನಿಗೆ ಇತ್ಯಾದಿ. ಗೊತ್ತು-ಸ್ಥಾನ.

೧೧೨. ಸೋಲಿಸಲು-ತಿರಸ್ಕರಿಸಲ್ಕು, ಸೌಂದರ್ಯದಲ್ಲಿ ಮೀರಿ ಇರಲು. ಬಗ್ಗಿಸೆ--ತಗ್ಗಿಸಲು. ಕಣ್ಮಲರ್--ಮಲರಂತಪ್ಪ ಕಣ್. ಇಕ್ಕಿ-ಹೊಡೆದು.

೧೧೩. ಅಚ್ಚರಿಸಿ-ದ್ಬ.ಅಪ್ಸರಸ್ತ್ರೀ. ಆಅಚ್ಚರಿಸಿ-ಇಲ್ಲಿ ಸಂಧಿಯಿಲ್ಲ. ಶ. ಶಾ|| 43. 'ಆದೇ' ಎಂಬ ಸೂತ್ರದಿಂದ ಆ ಕಾರಕ್ಕೆ ಅ ಆ ಕಾರಗಳೂ, ಐ ಔ ಕಾರಗಳೂ ಪರವಾದರೆ ಸಂಧಿಯಿಲ್ಲ. ಉ. ಸತಿಯಾ ಆಯೆಲ್ಲಕಂ, ಆಐಶ್ವರ್ಯಂ, ಆಔನ್ನತ್ಯಂ.

೧೧೪. ಬಿಡೆ-(ಅವ್ಯಯ) ವಿಶೇಷವಾಗಿ. ತುಱುಗಲ್-ಗುಂಪು.

೧೧೫. ಉಳ್ಳುದಂ-ನಿಜಸ್ಥಿತಿಯನ್ನು: ಧಾ. ಉಳ್, ಸತ್ತಾಯಾಂ.

೧೧೬. ಅಟ್ಟಳೆ-ಹೊಸಗನ್ನಡದಲ್ಲಿ ಅಟ್ಟಣೆ. ಪಟವಿಗೆ-ಧ್ವಜ. ದಾವಣ-(?) ಸೊದೆ-ದ್ಬ. ಸುಧಾ, ಸುಣ್ಣ. ಬೀಡು-ಮನೆ; ಮತ್ತೊಂದರ್ಥ, ಸೇನಾನಿವೇಶ.

೧೧೯. ಚದುರ್--ಚಾತುರ್ಯ. ತಕ್ಕುಂ--ಯೋಗ್ಯತೆಯೂ. ಆಯ-ಅರ್ಹತೆ. ಬೀರ-ವೀರ್ಯ, ಪರಾಕ್ರಮ. ರೂಢಿ-ಪ್ರಸಿದ್ಧಿ. ಒಡವೆಗಳಂ-ವಸ್ತುಗಳನ್ನು.

೧೨೦. ನಚ್ಚಿನ-ವಿಶ್ವಾಸಕ್ಕೆ ಪಾತ್ರಳಾದ. ಇಚ್ಚೆಗಾರ್ತಿ-"ಇಚ್ಚೆಗಾರ್ತಿ ರತಿ" ಚತುರಾಸ್ಯ.

೧೨೧. ಪಳಿದು-ನಿಂದಿಸಿ.

೧೨೨. ಸವನಿಸು-ಸಮನಿಸು, ಸಮಾನವಾಗು. ಕಂದು-ಲಾಂಛನ, ಕರೆ. ಹಿಮಗದಿರ-ಹಿಮಕಿರಣ, ಚಂದ್ರ.

೧೨೩. ಬಳಿವಳಿ=ಬಳಿ+ಬಳಿ, ಅತ್ಯಂತಸಮೀಪ. ಬಾಳ್ಗಂಬ-ಆನೆಯನ್ನು ಕಟ್ಟುವ ಕಂಬ, ಆಲಾನಸ್ತಂಭ; ಪ್ರ. "ಕರಿಗಳ್ ಬಾಳ್ಗಂಬದೊಳೊಪ್ಪಿರುತಿರ್ಪುವು" ಗಿರಿಜಾಕಲ್ಯಾಣ ೨. ೭೫. ಕಮ್ಮಂಗೋಲ-ಕಮ್ಮಿತಾದ ಕೋಲುಳ್ಳವ, ಮನ್ಮಥ. ನಳಿತೋಳ್-ಕೋಮಲವಾದ ತೋಳು. ತೇಂಕಿಸೆಯುಂ-ತನ್ನ ಕಡೆಗೆ ಹಾರಿಬರುವಂತೆ ಮಾಡಲು. ಅಳವಿಗಳಿದ-ಮಿತಿಮೀರಿದ. ಪೆರ್ಚಳ-ಹೆಚ್ಚು; ಹೊಸಗನ್ನಡ 'ಹೆಚ್ಚಳ.'

೧೨೪. ಕಟ್ಟಣಕದ ಕಟ್ಟಿಗೆ-ಬಹಳ ಸುಂದರವಾದ ಕಟ್ಟಡ (?). ನಳನಳಿಸಿ-ಕೋಮಲವಾಗಿ. ಉಡಿ-ನಡು; ಪ್ರ. ಉಡಿದಾರ. ಕಟ್ಟಲೆ-ಹೊಸಗನ್ನಡರೂಪ, ಕತ್ತಲೆ.

೧೨೫. ಇಂಬುವೆತ್ತ=ಇಂಬಂ ಪೆತ್ತ, ಮನೋಹರವಾದ. ನುಣ್ಬೊಗರಿ=ನುಣ್ಣಿತ್ತು+ಬೊಗರಿ, ನುಣ್ಣಗಿರುವ ಬುಗರಿ. ಸುಳಿತರ್ಪ-ಸುತ್ತುತ್ತಿರುವ.

೧೨೬. ಓಜೆ-ಬೆಡಗು, ಸೊಬಗು. ಪಾಡು-ಹಾಡು. ಚಪ್ಪರಿಸು-ಶಬ್ದಮಾಡು.

೧೨೮. ಕನ್ನಡವಕ್ಕಿ-"ಗಿಳಿ" ಶಬ್ದಸಾರ. ಅಗ್ಗಲಿಸಿದ-ಅಧಿಕವಾದ; ಪ್ರ. "ರಾಗಮುಗ್ಗಲಿಸಿದ ದೋಷದೃಷ್ಟಿವಿಷಯಾತುರರ್" ಪಂ. ರಾಮಾಯಣ ೬. ಇಂಬಱಿದಿರ್ಪ=ಇಂಬಂ+ಅಱಿದಿರ್ಪ, ಆಶ್ರಯವನ್ನು ತಿಳಿದಿರುವ: ಇಂಬು-ಎರಡರ್ಥವೇನು?

೧೩೦. ಕೇಸ-ದ್ಭ.ಕೇಶ, ಕೂದಲು. ದಳವಾದ-ಸಾಂದ್ರವಾದ. ಇರುಳಂವದಿಂ-ಶುಕ್ಲಪಕ್ಷದ ರಾತ್ರಿಯ ಹಾಗೆ; ಹೇಗೆ?

೧೩೨. ಎವೆ-ರೆಪ್ಪೆಯ ಕೂದಲು.

೧೩೩. ಸಱುಮಿಂಡಿ-ಕನ್ಯೆ, "ಪ್ರಥಮ ಋತುವಾಗದವಳ್" ಶಬ್ದಮಂಜರಿ.

೧೩೪. ಪೊನ್ನೊಡೆಯ-ಕುಬೇರ. ಮೆಯ್ಗಣ್ಣ-ಇಂದ್ರ. ಅಗ್ಗ-ದ್ಭ. ಅರ್ಘ, ಶ್ರೇಷ್ಠ. ಬೆಳ್ಮಾಡಿ-ಮರುಳುಮಾಡಿ, ಬೆಪ್ಪನಮಾಡಿ. ಬೇಟ್ಪಂತುಟು-ಬೇಡುವಷ್ಟು, ಅತಿಯಾಗಿ. ಉಬ್ಬಸ-ಸಂಕಟ. ಬರ್ದೆಯರ್-ಪ್ರೌಢಸ್ತ್ರೀಯರು.

೧೩೬. ಮೆಲ್ಪು-ಮಾರ್ದವ. ತಿಱಿದು-ಕೊಯ್ದು. ಕಾವಂ-ಕಾವನ್ನು. ಈಯುತುಂ, ಕುಡುತುಂ, ನೀಡುತುಂ-ಇವು ಮುಂದಣ ಪದ್ಯದಲ್ಲಿರುವ 'ಕಾದಲೆ' ಎಂಬ ಪದದಲ್ಲಿ ಅನ್ವಯಿಸುತ್ತವೆ. ಹೀಗೆ ಎರಡು ಮೂರು ಶ್ಲೋಕಗಳಿಗೆ ಒಂದೇ ಅನ್ವಯವುಂಟಾದರೆ, ಅವುಗಳಿಗೆ ಸಾಧಾರಣವಾಗಿ ಕುಳಕವೆಂಬ ಹೆಸರನ್ನು ಕೊಡುತ್ತಾರೆ.

೧೩೭. ಕಾದಲೆ-ಪ್ರಿಯತಮೆ.

೧೩೯. ಸುಗಿವೆ-ಹೆದರುತ್ತೀವೆಯೆ ? ಮಲೆವವರಂ-ಪ್ರತಿಭಟಿಸುವವರನ್ನು, ಕೋಡಗಗಟ್ಟಂ ಕಟ್ಟಿ-ಕಪಿಯನ್ನು ಕಟ್ಟುವ ಹಾಗೆ ಕಟ್ಟಿ. ಬೆಸಸು-ಅಪ್ಪಣೆಯನ್ನು ಕೊಡು ; ಧಾ. ಬೆಸಸು. ಗಳಪು-ಸದ್ದು. ಒಯ್ಯಗೆ-ಮೆಲ್ಲನೆ.

೧೪೦. ನುಣ್ಪು-ಹೊಸಗನ್ನಡ, ನುಣುಪು. ಎರ್ದೆವತ್ತಿದ-ಎರ್ದೆಯಂ ಪತ್ತಿದ, ಎದೆಯ ಮೇಲೆ ಬಿದ್ದಿರುವ.

೧೪೧. ಸಮೆದ-ಮಾಡಿದ. ಪಾಱುಂಬಳೆ-ಚಕ್ರ.

೧೪೨. ಉಱುವಣೆ-ವೇಗ. ಉಚ್ಚಳಿಸುವ-ಮೇಲಕ್ಕೆ ಹಾರುವ.

೧೪೩. ಬೆಕ್ಕಸ-ವಿಸ್ಮಯ, ಆಶ್ಚರ್ಯ

೧೪೪. ಅಳ್ಕದ-ಹೆದರದ. ಬೆಸಕೆಯ್ದು-ನಿನ್ನ ಅಪ್ಪಣೆಯ ಪ್ರಕಾರ ನಡೆದು ; ಬೆಸ--ಅಪ್ಪಣೆ, ಪ್ರ. „ಆಬಾಲಕನರಸುಮಾಳ್ಪುದಿದು ನಿಮಗೆ ಬೆಸಂ" ಪಂಪರಾಮಾಯಣ ೧. ೫೦.

೧೪೫. ದುಟ್ಟಗೊರವ-ದುಷ್ಟನಾದ ಗೊರವ; ಈಶ್ವರನು. ಗೊಟ್ಟಂ-ದ್ಭ.ಗೋಷ್ಠ ; ವಾಸಸ್ಥಾನ. ಕಿತ್ತಡಿ-ವ್ರತಿ. ಮರುಳ್ವಡೆ-ಪಿಶಾ

ಚಿಗಳ ಗುಂಪು. ನಿಮ್ಮಡಿ-ನೀವು ಎಂಬುದಕ್ಕೆ ಗೌರವಾರ್ಥದಲ್ಲಿ 'ನಿಮ್ಮಡಿ' ಎಂದು ಪ್ರಯೋಗಿಸುವುದುಂಟು; ಈಗಲೂ 'ನಿಮ್ಮಪಾದ' ಎಂದು ಗ್ರಾಮ್ಯಪ್ರಯೋಗವಿದೆ. ಲೆಕ್ಕಿಸದೆ-ಲಕ್ಷ್ಯಮಾಡದೆ. ನೇವಾಳ-ಹಾರ; ಪ್ರ. "ನೇವಾಳವೆಂದು ಕೆಲಬರ್ | ಪಾವಂ ಪಿಡಿವಂತೆ" ಪಂಪ. ರಾಮಾಯಣ ೮. ೭.೪೧.

೧೪೭. ಆಣೆ-ದ್ಭ.ಆಜ್ಞಾ. ಈ ವರ್ಣನೆಯಲ್ಲಿ ಕಂಡುಬರುವ ಸೊಗಸೇನು?

೧೪೮. ಸರಿ-ದ್ಭ.ಝರಿ, ಪ್ರವಾಹ. ಇಲ್ಲಿ ಅಂಚೆ, ಬಾಳೆ, ಅಱಿಡಿ, ಸೋಗೆ, ಪಾಡು ಇತ್ಯಾದಿ ಶಬ್ದಗಳಿಗೆ ಇರುವ ದ್ವಂದಾರ್ಥಗಳ ಸಹಾಯದಿಂದ ವರ್ಣನೆಮಾಡಿದೆ. ಶತ್ರುವಾದ ಮನ್ಮಥನ ಪರಿವಾರವಾದುದರಿಂದ ಅವುಗಳನ್ನು ಈಶ್ವರನು ಸಹಿಸನೆಂದು ಕವಿವರ್ಣನೆಗೆ ಭಾವ. ಅಂಚೆ-ಹಂಸ; ಬಟ್ಟೆ, "ಅಂಚೆಯೆಂದು ಕಪ್ಪಡಂ" ಶಬ್ದಸಾರ. ಬಾಳೆ-ಒಂದು ತರದ ಮೀನು; ಬಾಳೆಯ ಮರ. ಅಱಿಡಿ-ಭ್ರಮರ, ತೊಂದರೆ. ಕೊಡಗೂಸು-ಕನ್ಯೆ. ಸೋಗೆ-ಕಣ್ಣಿನ ಸೋಗೆ; ನವಿಲ ಗರಿ. ಬೆದಂಡೆ-ದ್ಭ.ವೈದಂಡಿಕಾ, ಒಂದು ವಿಧವಾದ ಕಾವ್ಯ; ಇದಕ್ಕೆ ಲಕ್ಷಣ-" ಕಂದಮುಮಮಳಿನ ವೃತ್ತಮು | ಮೊಂದೊಂದೆಡೆಗೊಂದು ಜಾತಿ ಜಾಣೆಸೆಯೆ ಬೆಡಂ || ಗೊಂದಿಮಱೋಮರೆ ಪೇೞಲ್ | ಸುಂದರರೂಪಿಂ ಬೆದಂಡೆಗಬ್ಬಮದಕ್ಕುಂ ||" ಕವಿರಾಜಮಾರ್ಗಾಲಂಕಾರ. ಪಾಡು-ಹಾಡು; ಕಷ್ಟ. ನೆರೆ-ಪಾರ್ಶ್ವ; ಕೂಡುವಿಕೆ. ಪಣ್-ಹಣ್ಣು; ಮಾಡುವುದು.

೧೪೯. ತಾರಗೆ-ದ್ಭ.ತಾರಕಾ, ನಕ್ಷತ್ರ. ಮುಱು-ಅಂಧಕಾರ. ಬಾಟ್ದಲೆ ಪಿಡಿದಂ-ಜೀವದೊಡನೆ ಸೆರೆಹಿಡಿದನು. ತಾರಗೆಗಳಿಗೆ, ನೈದಿಲೆಗಳಿಗೆ, ಮಬ್ಬಿಗೆ, ಕಡಲಿಗೆ ಚಂದ್ರನಿಂದ ವಿಕಾಸವೂ, ಚಂದ್ರನಿಲ್ಲದಾಗ ಹೀನತೆಯೂ ಸಹಜ; ಇದನ್ನು ಕವಿಯು ಸೆರೆಹಿಡಿದುದಕ್ಕೆ ಫಲವಾಗಿ ವರ್ಣಿಸಿದ್ದಾನೆ.

೧೫೧. ತಲೆಯ ಕಿಚ್ಚಿನೊಳ್-ಕಿಚ್ಚಿನ ತಲೆಯಲ್ಲಿ. ನೆಯ್-ತುಪ್ಪ; ಪ್ರ. ಜೇನೆಯ್.

೧೫೨. ಅಟ್ದಲುಂ-ಹೊಸಗನ್ನಡ ಅದ್ದಲು. ಪೊಡವಿ-ದ್ಭ.ಪೃಥಿವಿ. ಕೊಂಕಿ-ವಕ್ರವಾಗಿ, ಬಗ್ಗಿ. ತಳ್ಕ-ಆಲಿಂಗನ. ಪೆಡೆ-ದ್ಭ.ಸ್ಫಟಾ, ಹೆಡೆ.

ಬಾಸುಗಿ-ದ್ಭ.ವಾಸುಕಿ, ವಾಸುಕಿಯೆಂಬ ಸರ್ಪ. ದಪ್ಪ-ದ್ಭ.ದರ್ಪ, ಗರ್ವ. ದಪ್ಪಗ-ದ್ಭ.ದರ್ಪಕ, ಮನ್ಮಥ.

೧೫೪. ಜವ-ದ್ಭ.ಯಮ. ಒಂಬತು-ಇದು ಒಂಬತ್ತು ಎಂಬುದರ ರೂಪಾಂತರ; ಪ್ರ. "ನಂದನನುತ್ಸಂಗದೊಳ್ | ದೋರ್ದ್ವಂದ್ವದೆರಡೊಂಬತೆಂದು ತೊವಳಿಸೆವಿನಂ" ಚಂದ್ರಪ್ರಭಪುರಾಣ. ಹೀಗೆ ಪತ್ತು ಎಂಬುದಕ್ಕೆ ಪತು ಎಂಬ ರೂಪವುಂಟು; ಪ್ರ. "ಲವಾಕಾಲಂ ಮೂವತೆಣ್ಬುವರೆಯೆನಿಪ" ಪಂ. ರಾಮಾಯಣ ೧. ೫೦. ಗರ-ದ್ಭ.ಗ್ರಹ. ಗೊಂಟು-ದಿಕ್ಕು. ಕಡಂಗಿ-ಉತ್ಸಾಹದೊಡನೆ. ಅಱಿಲ್-ನಕ್ಷತ್ರ; ರೂಪಾಂತರ, ಅಱಿಲ್; ಪ್ರ. "ಅಱಿಲ್ವಟ್ಟೆ"=ಆಕಾಶ. ಐದುಂಮೊಗಮುಳ್ಳನಂ-ಈಶ್ವರನನ್ನು. ಮೂಱಡಿಯಿಟ್ಟಂ-ತ್ರಿವಿಕ್ರಮ, ವಿಷ್ಣು. ಅಚ್ಚಿ-ದ್ಭ. ಅಕ್ಷಿ, ನೇತ್ರ. ಎರಡು+ಅಂತು+ಒಂದಾಗಿ-ಏಕೀಭವಿಸಿ. ಈ ಪದ್ಯದಲ್ಲಿ ಒಂದರಿಂದ ಹತ್ತರವರೆಗೆ ಸಂಖ್ಯೆಗಳೆಲ್ಲಾ ಬಂದಿರುವುವು; ಇದು ಶಬ್ದ ಚಿತ್ರ.

೧೫೫. ಮುಕ್ಕಣ್ಣ-ಮೂಱು ಕಣ್ಣುಳ್ಳವಂ, ಈಶ್ವರ.

೧೫೬. ಒಡರಿಪುದಂ-ಪ್ರಯತ್ನಪಡುವುದನ್ನು.

೧೫೭. ನೆಲದಱಿಕೆಯ-ಜಗದ್ವಿಖ್ಯಾತನಾದ.

೧೫೮. ಗೋಣ್ಮುಱಿಗೊಂಡು-ಕತ್ತನ್ನು ಮುರಿದು ಶ್ರಮಪಡಿಸಿ. ಅಣ್ಣರ್-ಹೇಡಿಗಳು. ಆರ್ದು-ಆರ್ಭಟಿಸಿ. ಪೋರ್ದ-ಯುದ್ಧಮಾಡಿದ. ಆನೆಮೆಯ್ಯಾತ-ಗಜಾಸುರ. ಬಲ್ಪುಮೊಗ್ಗೆಗರ್-ಶೂರರು (?)

೧೫೯. ಆಳ್ತನ-ಪರಾಕ್ರಮ. ಕೂರ್ಪವರ್-ಸ್ನೇಹಿತರು. ಇಱಿವೆಂ-ಕೊಲ್ಲುವೆನು. ಅರಸಾಳ್-ರಾಜುಭಾರಿ. ಮಗುಳ್ದು-ಮರಳಿ. ತಿರ-ದ್ಭ. ಸ್ಥಿರ. ಎತ್ತಿ-ಸೇನೆಯೊಡನೆ ಹೋಗಿ. ಮಂತಣ-ದ್ಭ. ಮಂತ್ರಣ, ಆಲೋಚನೆ,

೧೬೦. ಮಂತಣೆ-ದ್ಭ. ಮಂಥನಾ, ಕಡೆಯುವಿಕೆ, ದಂಡಿಸುವಿಕೆ. ಮೂದ-ದ್ಭ.ಮೂತ, ಆಳು. ತಪ್ಪಲ್-ಹೊಸಗನ್ನಡ, ತಪ್ಪಲು. ತೆಱಪಱಿದು=ತೆಱಪಂ+ಅಱಿದು, ಸಮಯವನ್ನು ತಿಳಿದು.

೧೬೧. ಬೀರ-ಶೌರ್ಯ. ನಂಜು-ವಿಷ. ಬೀರ-ವೀರಭದ್ರ. ರೂಪು-ದ್ಭ.ರೂಪ.

೧೬೨. ತಿರಿಸುಳಿ-ದ್ಭ. ತ್ರಿಶೂಲಿ, ಈಶ್ವರ. ಇರ್ತರಂ=ಎರಡು+ತರಂ, ಎರಡು ಸಾಲಾಗಿ. ಜತಿ-ದ್ಭ.ಯತಿ.

೧೬೩. ಮಾರ್ಪೊಳೆವು-ಪ್ರತಿಫಲನ. ಇದು ಇಂದ್ರನ ಮನೋಹರವಾದ ವರ್ಣನೆ.

೧೬೪. ನುಡಿವೆಣ್-ಸರಸ್ವತಿ. ನಾಲ್ಮೊಗಂ-ಬ್ರಹ್ಮನ ನಾಲ್ಕು ಮುಖವೂ. ಒಳಕೆಯ್ಯ-ಒಳಗು ಮಾಡಿಕೊಳ್ಳಲು, ಹೊಂದಲು. ನೋಟ್ಪರಾ-ಷಷ್ಠಿಯಲ್ಲಿ ದೀರ್ಘಾದೇಶ.

೧೬೫. ಧರೆ--ದ್ಭ.ಧರಾ, ಭೂಮಿ. ಕೈಗೊರೆ= ಕೈಗೆ+ಒರೆ-ಸಮಾನ.

೧೬೬. ಆರ-ಹಾರ. ಪಾಸ-ದ್ಭ. ಪಾಶ, ಹಗ್ಗ. ಕಣ್ದೆಱೆದಂತೆ-ನೇತ್ರೋನ್ಮೀಲನವಾದಂತೆ, ಕಣ್ಣಿಗೆ ಚೆನ್ನಾಗಿ ಗೋಚರವಾದಂತೆ. ತೊವಲ್-ತೊಗಲು

೧೬೭. ಹಬ್ಬ-ದ್ಭ. ಪರ್ವ, ಉತ್ಸವ. ಕಱೆಗೊರಲ-ನೀಲಕಂಠ, ಶಿವ.

೧೬೯. ತುಟಿಲ್ಗೆಯ್ದು-ನಮಸ್ಕರಿಸಿ. ಓಲೆಗಂ-ಆಜ್ಞಾಲೇಖನಕ್ಕೂ, ಉಂಡಿಗೆಗಂ-ಮೊಹರಿಗೂ; ಬಸ-ದ್ಭ.ವಶ, ಸ್ವಾಧೀನ. ಅಱೆವನಿತಂ-ತಿಳಿದಷ್ಟನ್ನು. ಪವಣಲ್ತು-ನನ್ನ ಶಕ್ತಿಗೆ ಮೀರಿ ಇದೆ; ಪವಣ್-ದ್ಭ. ಪ್ರಮಾಣ, ಅಳವು.

೧೭೧. ಕೆಡೆದುದನೆ-ಕೆಳಗೆ ಬಿದ್ದುದನ್ನುಮಾತ್ರ. ಇಲ್ಲಿ ಕವಿಯು ಬಾಣಪ್ರಯೋಗದಲ್ಲಿ ಕರಲಾಘವವನ್ನು ವರ್ಣಿಸಿದ್ದಾನೆ.

೧೭೨. ಆಂತರ್-ಪ್ರತಿಭಟಿಸಿದವರು. ಕೊಂಬಂ ಪೊರ್ದಿ-ಮರವನ್ನು ಹತ್ತಿ. ನಾಣ್ಗುಂದಿ-ನಾಚಿಕೆಗೆಟ್ಟು.

೧೭೩. ಆವುಗಳ್-ದನಕರುಗಳು. ಮಾವುಗಳವು-ಆವು ಮಾವುಗಳ್-ಆ ಪ್ರಸಿದ್ಧವಾದ ಮಾವುಗಳು.

೧೭೪. ಕೆಳೆಯಂ-ಸ್ನೇಹಿತ. ದೆಸೆವಲಿ-ದ್ಭ. ದಿಶಾಬಲಿ, ದಿಗ್ಬಲಿ. ಪಾಳಿ-ಸೈನ್ಯ; ಇದು ಪಾಡಿ ಎಂಬುದರ ರೂಪಾಂತರ. ಪೊಣರ್ದು-ಜಗಳವಾಡಿ. ಎರ್ದೆ-ಹೃದಯ, ಧೈರ್ಯಗುಣಕ್ಕೆ ಸ್ಥಾನ. ಎಣ್ಟೆರ್ದೆಯುಳ್ಳರಾದೊಡಂ-ಎಲ್ಲರಿಗಿಂತ ಎಂಟುಮಡಿ ಧೈರ್ಯವುಳ್ಳವರಾಗಿದ್ದರೂ.

೧೭೫. ಪರಿದು-ಸುತ್ತಿ. ಸರದೆ-ಧ್ವನಿಯಿಂದ.

೧೭೬. ದೊರೆವೆತ್ತ-ಪ್ರಸಿದ್ಧಿಹೊಂದಿದ. ನಲ್ವಗೆಗೊಂಡೊಡೆ— ಒಳ್ಳೆಯ ಮನುಸ್ಸುಳ್ಳವರಾದರೆ, ಸ್ನೇಹಿತರಾದರೆ. ಪೊನ್ನದು ಕಮ್ಮಿತಾದ ತೆಱಂ-,, ಸುವರ್ಣಸ್ಯಸೌರಭಂ, " ಪೊನ್ನು ಮೊದಲೇ ಆಶೆಪಡತಕ್ಕ ವಸ್ತು. ಅದರಲ್ಲಿ ವಾಸನೆಯೂ ಇದ್ದರೆ ಹೇಳಬೇಕಾಗಿಲ್ಲ.

೧೭೭. ತೀರದುದು-ಸಾಧ್ಯವಾಗದ ಕಾರ್ಯವು. ಈಗಡೆ-ಈಗಳೆ, ಈವಾಗಲೇ; ಕನ್ನಡದ ಪದಗಳಲ್ಲಿರುವ ' ಡ ' ಕಾರಕ್ಕೆ ' ಳ ' ಕಾರಾದೇಶ ಉಂಟು. ಉ. ಆಗಡೆ, ಆಗಳೆ ; ಏಡಿಸು, ಏಳಿಸು ; ಗಡ, ಗಳ ; ಗೆಡೆ, ಗೆಳೆ ; ಪಾಡಿ, ಪಾಳಿ, ಇತ್ಯಾದಿ.

೧೭೯. ಬಱುವಾತು-ವ್ಯರ್ಥಾಲಾಪ. ತಱಸಂದಿರ್ದುದಂ-ನಿಶ್ಚಯಿಸಿದುದನ್ನು ; ಧಾ. ತಱಸಲ್-ನಿಶ್ಚಯೇ.

೧೮೦. ಉರ್ಕ್ಕಾಳ್ಗಳ್-ಉರ್ಕಿನ ಆಳ್ಗಳ್, ಉದ್ಧತಭಟರು.

೧೮೧. ಉಬ್ಬಟಯ-ಅಧಿಕವಾದ. ಉದ್ದಂಜಱುಚಿದೆ-ಹೆಚ್ಚಾಗಿ ಹರಟಿದೆ. ಕೇರ್-ಗೋಡೆ. ಮರುಳಂ-ಮೂಢನನ್ನು.

೧೮೨. ಕೋಡುವ-ಭಯಪಡುವ ; ಧಾ. ಕೋಡು, ಭಯೇ. ಕೂಂಕುವ-ಓಡಿಹೋಗುವ ; ಧಾ. ಕೂಂಕು, ಉತ್ಸರ್ಪಣೇ. ನೋಡಿರೆ (ಅವ್ಯಯ)-ನೋಡು. ಪ್ರ. ,, ನೋಡಿರೆ ಕಿನ್ನರರ್ದ್ದಶರಥಕ್ಷಿತಿನಾಥನ ಬೀರದೇಳ್ಗೆಯಂ | ಪಾಡೆ " ಪಂಪರಾಮಾಯಣ ಆ ೧. ೧೬. ಸೂಡುವ-ಮುಡಿದುಕೊಳ್ಳುವ.

೧೮೩. ಮರವಟ್ಟ-ಸ್ತಬ್ಧವಾದ, ಮರದಂತೆ ನಿಂತಿರುವ. ಚಂದವ-ದ್ಬ.ಚಂದ್ರಮಾಃ, ಚಂದ್ರ. ಎಬ್ಬ-ಓಡಿ ಹೋದ; ಹೊಸಗನ್ನಡ ಎದ್ದ. ಬೆಳ್ಳಿದಾವರೆ-ಬೆಳ್ಳಿಯಂತೆ ಬಿಳುಪಾಗಿರುವ ತಾವರೆ. ಪೊಯ್ದ-ನೆಟ್ಟ. ಕೊಂಬುಗೊಂಡುಸಿರದಿರ್ಪ-ಮರವನ್ನೇರಿ ಮೂಗನ ಹಾಗಿರುವ. ಪೆರ್ಗಡೆ= ಹೊಸಗನ್ನಡ ಹೆಗ್ಗಡೆ-ಯಜಮಾನ.

೧೮೪. ಐಸರಲ-ಪಂಚಬಾಣ, ಮನ್ಮಥ. ಎತ್ತಿಸಿ-ಸೇನೆಯನ್ನು ಕರಕೊಂಡು ಬಂದು. ತೆಱಪುವಾರ್ದು-ಅವಕಾಶವನ್ನು ನೋಡಿ, ಸಮಯ ವಱಿತು. ೧೮೮. ತುರಿಪ-ಆತುರ.

೧೮೯. ಲಾಗುಳ-ಯೋಗದಂಡ. ಬಗರಿಗೆ-" ಬಕ್ಕರೆ " ಶಬ್ದ ಮಂಜರಿ ೭೩. ಬೆಸನ-ದ್ಭ.ವ್ಯಸನ, ಯೋಚನೆ: ಪ್ರ. "ಶಾಸ್ತ್ರವ್ಯಸನಂ"

೧೯೦. ಅಗುರ್ವಿಸುವ-ಭಯಂಕರವಾದ.

೧೯೧. ಬಳ್ಕುತೆ-ಬಗ್ಗಿ. ಬಾರಿ-ಮಹತ್ವ, ಹೆಚ್ಚಿಗೆ

೧೯೨. ಅಳುರ್ಕೆ-ವ್ಯಾಪ್ತಿ. ಆಂಬರಮೇ-ನನ್ನ ವರೆಗೇಕೆ ?

೧೯೩. ನಿಸ್ಸಾಳ-ವಾದ್ಯವಿಶೇಷ. ಸೂಡೈಸಲ್-ಶಬ್ದ ಮಾಡುವಂತೆ.

೧೯೪. ತಕ್ಕಡಿಗಾದೆ= ತಕ್ಕು+ಅಡಿಗೆ+ಆದೆ, ಯೋಗ್ಯತೆ ಇಂಗಿಹೋಗಲು. ನೀರ್ದಾಣಂ-ನೀರಿನ ತಾಣ. ಅಂಟುಗೊಂಡು-ಸ್ನೇಹ ಬಳೆಸಿ, ಇಲ್ಲಿ ಮುಳುಗಿ.

೧೯೫. ಸದೆದು-ಹೊಡೆದು; ಧಾ. ಸದೆ-ಈಷಚ್ಚೂರ್ಣೇ. ಬಿಡದೆ-ಶೀಘ್ರದಲ್ಲಿ, ತಪ್ಪದೆ. ಕಡಂಗಿ-ಉತ್ಸಾಹದಿಂದ ಕೂಡಿ. ಅರೆವೆಣ್ಣ-ಅರ್ಧನಾರೀಶ್ವರ, ಶಿವ. ಕದಕದಪಂ ತೊಡರ್ಚೆ--ಕಂಪನವನ್ನುಂಟುಮಾಡಿ. ಎಳೆದೇರ= ತ್ರಿಪುರಸಂಹಾರದಲ್ಲಿ ಎಳೆಯನ್ನು-ಭೂಮಿಯನ್ನು ತೇರಾಗಿ ಮಾಡಿಕೊಂಡವನು, ಈಶ್ವರನು.

೧೯೬. ಪಳಂಚಲೆದು-ಸಂಘಟ್ಟಿಸಿ. ಮನದನ್ನರ್-ಇಷ್ಟಾನುವರ್ತಿಗಳು. ಸನ್ನಣ-ದ್ಭ.ಸನ್ನಾಹ. ಹಸಾದವನಿಟ್ಟು-ಅಪ್ಪಣೆಯನ್ನು ತೆಗೆದುಕೊಂಡು; ಹಸಾದ-ದ್ಭ. ಪ್ರಸಾದ. ಸಜ್ಜು-ಸಿದ್ಧವಾಗಿರುವಿಕೆ. ಚೌವಂದ= ಚೌ+ಅಂದ, ನಾಲ್ಕು ವಿಧ; ಚತುಃ ಎಂಬ ಪದಕ್ಕೆ ಸಮಾಸದಲ್ಲಿ ಚೌ ಎಂಬ ಆದೇಶ ಬರುತ್ತದೆ. ಉ. ಚೌವಟ್ಟಂ, ಚೌದೆಸೆ. ಸೆಲವಿತ್ತು-ಅನುಮತಿಯನ್ನು ಕೊಟ್ಟು. ಬಾಡ-ದ್ಭ.ವಾಟ, ಸಾಲು; ಮತ್ತೊಂದರ್ಥ ಊರು. ತಾಣಂದರ-(ದ್ಭ.ಸ್ಥಾನಾಂತರ)ಮಾಗಿರ್ಪ ವಾಸ ಮಾಡುವ. ಕೆಂಗಣ್ವಕ್ಕಿ-ಕೋಗಿಲೆ. ಅಲರ್ವಕ್ಕಿ-ದುಂಬಿ. ಪೊಣರ್ವಕ್ಕಿ-ಚಕ್ರವಾಕ. ದಟ್ಟಯ-ದಟ್ಟಿಕಟ್ಟಿಕೊಂಡಿರುವ, ಪರಾಕ್ರಮಿಗಳಾದ. ಪುಸಿವಡೆ-ಮಾಯಾಸೈನ್ಯ. ಸೇನಾಗ್ರ-ಮುಂಗುಡಿ. ಬೀರಪಸದನ-ದ್ಭ.ವೀರಪ್ರಸಾದನ, ವೀರರಿಗೆ ಉಚಿತವಾದ ಆಭರಣಗಳು.

೧೯೮. ನುಗುಳುತ್ತುಂ-ಪ್ರವೇಶಿಸುತ್ತಾ. ಪರಕೆ-ಆಶೀರ್ವಾದ. ಬಗೆವುಗೆ-ಇಷ್ಟದಿಂದ.

೧೯೯. ಮೊಗಸಾಲೆ-ದ್ಭ.ಮುಖಶಾಲಾ. ಚಂಪೆಯ-(?) ಚೌಕಿಗೆ-ದ್ಭ.ಚತುಷ್ಕಿಕಾ.

೨೦೦. ವಾರುವ-ಕುದುರೆ. ಮೋಹರ-ಸೇನೆ. ಒಡ್ಡು-ಸೇನೆ. ಅಮಳ್ವಕ್ಕಿ-ಚಕ್ರವಾಕ. ಕೊಂತ-ದ್ಭ. ಕುಂತ, ಆಯುಧವಿಶೇಷ. ಅಣಿ-ಸೈನ್ಯ. ಸಂವರಣೆ-ಸಿದ್ಧವಾಗಿರುವಿಕೆ.

೨೦೩ ತುಳುಂಕೆ-ತುಳುಕಲು, ಮೇಲೆ ಪ್ರವಹಿಸಲು. ಔಂಕುವಂತಿಡುವ-ಜಗ್ಗಿ ಹೋಗುವಂತೆ ಅಡಿಯಿಡುವ. ಅಟ-ಕುಸಿಯಲು. ಕಾಲ್ಪೊಱೆಯಿಂ-ಕಾಲಿನ ಭಾರದಿಂದ. ಬಡಿಗೆ-ಬಡಿಯುವ ಕೋಲು. ಅಂಕ-ಯುದ್ಧ.

೨೦೪. ಪಲ್ಲಣ-ದ್ಭ. ಪಲ್ಯಾಣ, ಕುದುರೆಯ ಜೀನು. ಮುಸುಂಕೆ-ಆವರಿಸಿಕೊಳ್ಳಲು. ಪಕ್ಕರಕ್ಕೆ-ದ್ಭ. ಪಕ್ಷರಕ್ಷಾ, ಜೂಲು ಕೊಡಂಕೆ-ಕಿವಿ. ಪೊಳೆವ-ಚಲಿಸುವ; ಧಾ. ಪೊಳೆ, ಲುಠನೇ. ಕೋಳ್ಗೆ-ಪೆಟ್ಟಿಗೆ, ಪ್ರ. "ಪೊಡದೆರೆಯ ಕೋಳ್ಗೆ ತೊಲಗಿದ | ನಳಿನಮನೆ" ವೃಷಭೇಂದ್ರವಿಜಯ ಆ ೪-೧೧. ತಳರೆ-ಚಲಿಸಲು. ತೇಜಿಯ ತಟ್ಟು-ಕುದುರೆಯ ಸೈನ್ಯ.

೨೦೫. ನೇಸಱ್-ಸೂರ್ಯ. ತೇರ್-ರಥ. ಪಾಡು-ಅಂದ, ರೀತಿ, ನಾನಾರ್ಥವೇನು? ಕೆಳರ್ತು-ಬಿರಿದು ಹೋಗಿ; ಧಾ. ಕೆಳರ್, ವಿಜೃಂಭಣೇ. ಜಂಕೆ-ಆರ್ಭಟಿ. ಗೊಂಟು-ದಿಕ್ಕು. ಕೋಡುವಿನಂ-ನಡುಗಿ ಹೋಗಲು. ತೋರ್ಕೆಯ-ಪ್ರಖ್ಯಾತವಾದ.

೨೦೬. ಪೊಡರ್ಪು-ಪ್ರತಾಪ. ಮಿೞ್ತು-ದ್ಭ. ಮೃತ್ಯು. ಬಲ್ಲಣಿ= ಬಲ್ಲಿತು+ಅಣಿ, ಬಲವಾದ ಸೇನೆ.

೨೦೭. ನಿಡುವಾಳೆ= ನಿಡಿದು+ಬಾಳೆ, ದೊಡ್ಡ ವಿಮಾನು. ಸತ್ತಿಗೆ-ದ್ಭ. ಛತ್ರಿಕಾ, ಕೊಡೆ. ಹಂತಿ-ದ್ಭ. ಪಙ್ಕ್ತಿ, ಸಾಲು. ನೆಗಟ್-ಮೊಸಳೆ. ನೆಗಟ್ಚ-ಉಂಟುಮಾಡಲು, ಅದರಂತೆ ಇರಲು. ಮಸಗಿ-ಉತ್ಸಾಹದಿಂದ.

೨೦೮. ಪಾಡಿ-ಸೈನ್ಯ; ರೂಪಾಂತರ, ಪಾಡು.

೨೦೯. ಪಟಯಿಗೆ-ಧ್ವಜ.

೨೧೧ ಎಸಳ್-ದಳ. ಗುಬ-ಜೂಲು. ನೀಳ್ಪು-ದೈರ್ಘ್ಯ, ಉದ್ದವಾಗಿರುವಿಕೆ. ಟೆಕ್ಕೆಯ-ಧ್ವಜ. ಕಡುಗೂರದವರ್-ಬಹಳವಾಗಿ ಪರಾಕ್ರಮವಿಲ್ಲದವರು.

೨೧೩. ಆರಗೀಲ್-ಅರೇಕಾಲು. ಮಡಂ-ಕಡಾಣಿ. ಅಡ್ಡವಂದ-ಅಡ್ಡಲಾಗಿ ಹಾಕಿರುವ. ಮೂಂಕು-ಹೊಸಗನ್ನಡ ಮೂಕಿ.

೨೧೪. ಉಱದೆ-ಅವ್ಯಯ, ವೇಗದಿಂದ.

೨೧೬. ಅಗ್ಗಳಿಕೆ-ಹೆಚ್ಚಿಗೆ, ಮೇಲ್ಮೆ. ಸಬಳ-ಡೊಂಕಣಿ, ಆಯುಧ ವಿಶೇಷ.

೨೧೮. ತುಱುಗಿ-ಗುಂಪಾಗಿ. ಬೇಡವೆಣ್ದಿರಿಂ-ಇದನ್ನು ಮುಂದಣ ಗದ್ಯದ ' ಗಾಡಿವಡೆದ ' ಎಂಬುದರಲ್ಲಿ ಅನ್ವಯಿಸಬೇಕು.

೨೨೦. ಗೊಂದಣ-ಸಮೂಹ.

೨೨೧. ಮಾಣಂ-ಬಿಡುವುದಿಲ್ಲ; ಧಾ. ಮಾಣ್, ನಿವಾರಣೇ.

೨೨೨. ಕೊಲ್ಲದುದೆ ದಿಟದಿನಱಂ-' ಅಹಿಂಸಾಪರಮೋಧರ್ಮಃ ' ಎಂಬ ಜಿನಧರ್ಮ. ಅಱಂ-ಧರ್ಮ. ಬಿಯದ-ದ್ಭ.ವ್ಯಾಧ, ಬೇಡ.

೨೨೪. ಸವಣ-ದ್ಭ.ಶ್ರಮಣ, ಜಿನ. ಪಿಡಿ-ಹೆಣ್ಣಾನೆ. ತಲೆದುಡಿಗೆ-ಶಿರೋಭೂಷಣ.

೨೨೬. ತವಸಿಂಗೆ-ತಪಸ್ಸಿಗೆ.

೨೨೭. ಕೊರಲ್ಗೆ-ಇಲ್ಲಿ ಶಿಥಿಲ. ಶಿಥಿಲಾಕ್ಷರಗಳಲ್ಲಿ ಲಕಾರವನ್ನು ದರ್ಪಣಕಾರನು ಸೇರಿಸಿಲ್ಲ. ಆದರೆ ಲಕಾರಕ್ಕೂ ಶಿಥಿಲವುಂಟೆಂದು ತೋರುತ್ತದೆ; ಪ್ರ. " ಪತಿಯಗಲ್ದವೇಗದಿಂ ದುಃ | ಖಿತೆಯಾಗಿರೆ ಕಂಡು ಕರುಣವಗ್ಗಲಿಸಲ್ || " ಕಾದಂಬರಿ. ೩೧೦. ಕೈಯನಿಕ್ಕಿ-ಕೈಯನ್ನು ಇಳಿಯ ಬಿಟ್ಟುಕೊಂಡು. ಬಗೆಗೊಳ್ವೆಱೆ ತಟ್ಟಿತೆಂಬಿನಂ= ಬಗೆಗೆ+ಒಳ್ವೆಱೆ+ತಟ್ಟಿತು ಎಂಬಿನಂ; ಇದು ಯೋಗಶಾಸ್ತ್ರದ ಚಂದ್ರಕಳಾದರ್ಶನವಾಗಿರಬಹುದು. ಒಳ್ವೆಱೆ= ಒಳ್ಳಿತು+ಪೆಱೆ, ಅತಿಶಯವುಳ್ಳ ಚಂದ್ರ.

೨೨೯. ತನಗೆ, ಸವನಪ್ಪವಂ-ಸಮನಾದವನು, ಪೊಣರ್ದನೆ-ಯುದ್ಧಮಾಡಿದವನೇ ಆದರೆ, ಕಾದುವುದು, ಎಂದನ್ವಯ. ಅಜ್ಜ-ದ್ಭ. ಆರ್ಯ, ಪೂಜ್ಯ. ಅನುವಂ-ರೀತಿಯನ್ನು, ಮರ್‍ಯಾದೆಯನ್ನು.

೨೩೦. ಪೞವಗೆ =ಪೞದು+ಪಗೆ, ಪುರಾತನಶತ್ರುಗಳು, ಅರಿಷಡ್ವರ್ಗಗಳು ; ಇಲ್ಲಿ ಒಳಪಗೆ (-ಅಂತಶ್ಶತ್ರು) ಎಂದು ಪಾಠವಿದ್ದಿದ್ದರೆ ಚೆನ್ನಾಗಿತ್ತು. ಬಳಿಯಂಗೆ-ಪರಾಕ್ರಮಶಾಲಿಗೆ.

೨೩೧. ಕಿಱುಕುಳನೆಂದು-ಹೀನನೆಂದು, ಏಳಿಸಲ್-ಹಾಸ್ಯ ಮಾಡಬೇಡ, ಮುಂದೆ, ನಿಂದ, ಸವಣನ, ರೂಪು, ಈತೆಱನಲ್ಲವೆ, ಎಂದನ್ವಯ. ಏಳಿಸಲ್-ಇಲ್ಲಿ ' ಅಲ್ ' ಎಂಬುದು ನಿಷೇಧಪ್ರತ್ಯಯ. ಶ. ಶಾ. 528.

೨೩೨. ಮುಡಿಗಿಕ್ಕಿ-ತಲೆಯಲ್ಲಿ ಕೈಯನ್ನು ಜೋಡಿಸಿ.

೨೩೩. ಉಱದೆ-ವೇಗವಾಗಿ, ಅಳವಿಂದೆ-ಪರಾಕ್ರಮದಿಂದ, ಕರಿ ಕೇಡದೆ-ಸೀದು ಕಪ್ಪಾಗಿ ಹೋಗುವುದಿಲ್ಲವೆ. ನಾರಿ-ಬಿಲ್ಲಿನ ಹೆದೆ. ಪಱಿಯದೆ-ಕತ್ತರಿಸಿ ಹೋಗುವುದಿಲ್ಲವೆ; ಧಾ. ಪಱಿ, ಕೃಂತನೇ. ಸೈತೆ-ನೆಮ್ಮದಿಯಾಗಿ, ಸುಮ್ಮನೆ.

೨೩೪. ಪಱಿವಱಿಯಾದ-ಚೂರು ಚೂರಾದ. ಸುರಿವಮುತ್ತುಗಳಂ-ಮೇಘದಲ್ಲಿಯೂ ಮುತ್ತು ಹುಟ್ಟುತ್ತದೆಂದು ಪ್ರತೀತಿ. ತಂದಲ್-ಜಲಕಣ. ಅಂಗೈಸುವ-ಯತ್ನಿಸುವ. ಗೆತ್ತು-ಭ್ರಮಿಸಿ. ಧಾ. ಗಿಱಿ, ಪರಿಭಾವನೇ; ಪ್ರ. "ಮಣಿದೀಧಿತಿಯಂ ಕಡುಮಿಂಚುಗೆತ್ತು." ಅನುಗೆಯ್ವ-ಯತ್ನಿಸುವ. ಅವ್ವಳಿಸುವ-ಆತುರಪಡುವ. ಮುಂಗುಲಿ-ಮುಂಗುಸಿ. ಕೆಟಲ್ದು-ಬಿದ್ದು. ಈಡಿಱುವ-ಕೊಂಬನ್ನು ತೀಡುವ; ಧಾ. ಈಡಿಱು, ಶೃಂಗಘರ್ಷಣೇ. ಪರೆದ-ಚದುರಿಹೋದ. ಗುರುಗುಂಜಿ-ಹೊಸಗನ್ನಡ ಗುಲುಗುಂಜಿ. ತುಱುಗಲ್-ಗುಂಪು. ಕೊಱಂಡು-ಹೊಸಗನ್ನಡ ಕೊರಡು. ಮಿಡಿವಿಲ್ಲು-ಸಣ್ಣ ಸಣ್ಣ ಗೋಲಿಯನ್ನು ಹೊಡೆಯುವ ಬಿಲ್ಲು.

೨೩೫. ಪಡಿ-ದ್ಭ. ಪ್ರತಿ, ಸದೃಶ.

೨೩೬. ಚಪ್ಪರಿಪಂತಿರೆ-ಹಾಸ್ಯಮಾಡುವ ಹಾಗೆ; ಧಾ ಚಪ್ಪರಿಸು.

೨೩೭. ಅಣೆವ-ಮುಟ್ಟುವ; ಧಾ. ಅಣೆ, ಸ್ಪರ್ಶನೇ. ಕೋಡು-ದ್ಭ. ಕೂಟ, ಪರ್ವತಶಿಖರ. ತಾಱ್-ಧ್ಭ. ತಾಳ, ತಾಳೆಯಮರ.

೨೩೮. ಪೂಗುಡಿ-ಪುಷ್ಪಸ್ತಬಕ. ಮಡಲ್ತೊಂಡ-ಹಬ್ಬಿಕೊಂಡ. ಮಂಡವಿ-ದ್ಭ. ಮಂಟಪಿಕಾ. ಗೂಡಾರ-ದ್ಭ. ಗೂಢಾಗಾರ. ಬೀಗಿ-ಉಬ್ಬಿ; ಧಾ. ಬೀಗು, ಹರ್ಷಭಾವೇ. ಕಂಡರಿಸಿದಂತೆ-ಶಿಲೆಯಲ್ಲಿ ಕೆತ್ತಿದಹಾಗೆ.

೨೩೯. ನೊಸಲಕಣ್ಣಾಯ್ದವ-ಶಿವನ ಕಣ್ಣಿನಿಂದ ಹುಟ್ಟಿದ ವೀರಭದ್ರ; ಪೂರ್ವಕಥೆ ಏನು ?

೨೪೦. ಪೋಗೊದೆ= ಪೋಗು+ಒದೆ. ಉಗಿದು-ಉಗುರಿನಿಂದ ಕೆರೆದು; ಧಾ. ಉಗಿ, ನಖಕ್ಷತೇ.

೨೪೧. ಮೂದಲಿಸಿಯಲ್ಲದೆ-ಧಿಕ್ಕಾರ ಮಾಡಿದ ಹೊರತು; ಧಾ. ಮೂದಲಿಸು. ಎಱಗಿದಲ್ಲದೆ-ಮೇಲೆ ಬಿದ್ದ ಹೊರತು. ಸಾಱುವಲ್ಲದೆ-ಮುಂದೆ ತಿಳಿಸಿದಲ್ಲದೆ.

೨೪೨. ಒಕ್ಕಲಿಕ್ಕಿ-ಕೊಂದು; ಧಾ. ಒಕ್ಕಲಿಕ್ಕು. ಸೂನಿಗೆಯ-ಕತ್ತಿಗಳು ತುಂಬಿರುವ. ಭಂಡಿ-ಹೊಸಗನ್ನಡ ಬಂಡಿ. ಭಂಡಣ-'ಕಾಳೆಗಂ' ಶ. ದ. ಪು. 402. ನಚ್ಚಿನ-ವಿಶ್ವಾಸಕ್ಕೆ ಪಾತ್ರನಾದ. ಲೆಂಕ-ಭಂಟ.

೨೪೩. ಬಿಸುಗಣ್ಣ-ಶಿವನು. ೨೪೪. ಗಂಡರ್-ಶೂರರು.

೨೪೬. ಆದಂ (ಅವ್ಯಯ)-ವಿಶೇಷವಾಗಿ. ತಱಸಂದು-ನಿಶ್ಚಯವಾಗಿ, ಖಂಡಿತವಾಗಿ.

೨೪೭. ಪುಯ್ಯಲ್-ಶಬ್ದ; ಹೊಸಗನ್ನಡದಲ್ಲಿ ಹುಯ್ಯಲು, ಹುಯ್ಲು.

೨೪೮. ಅಳುರ್ವ-ಪ್ರಸರಿಸುವ. ಸಬುದ-ದ್ಭ. ಶಬ್ದ.

೨೫೦. ಬೀರ-ವೀರಭದ್ರ. ಬೀರವಱೆ= ಬೀರ+ಪಱೆ (-ಭೇರಿ). ಕಿವುಂಡು-ಹೊಸಗನ್ನಡ ಕಿವುಡು.

೨೫೧. ಮೀನಗೆ-ದ್ಭ. ಮೀನಕ, ಮತ್ಸ್ಯ. ಮೊಗ್ಗರ-ಗುಂಪು.

೨೫೨. ನುಣ್ಬೊಗರ್-ನುಣುಪಾದ ಕಾಂತಿ. ತಳ್ಪೊಯ್ಯೆ-ಹೊಡೆಯಲು. ಪಾಡಿಂತು= ಪಾಡು-(ಸೈನ್ಯ)+ಇಂತು.

೨೫೩. ಆರ್ದು-ಗರ್ಜಿಸಿ. ಎಕ್ಕೆಕ್ಕೆಯಿಂ-ಒಟ್ಟೊಟ್ಟಿಗೆ. ಪಲ್ಲಣಿಸಿ-ಜೀನುಕಟ್ಟಿ. ನೊಣೆಯುತುಂ-ನುಂಗುತ್ತಲೂ; ಧಾ. ನೊಣೆ, ಗಿಳನೇ.

೨೫೪. ಒಲೆದು-ಒಂದು ಕಡೆಗೆ ಬಾಗಿ; ಧಾ. ಒಲೆ, ಆಂದೋಳನೇ. ಓಗುರ್ಡಿಸುಗುಂ-ಒಂದು ಕಡೆಗೆ ರಾಶಿಯಾಗಿ ಬೀಳುವುದು.

೨೫೬. ಸಾಸಿಗ-ದ್ಭ. ಸಾಹಸಿಕ.

೨೫೭. ಈಂದಂತೆಯುಂ, ಬೆಸಲಾದಂತೆಯುಂ-ಹೆತ್ತಂತೆಯೂ.

೨೫೯. ಮಾಣಿಕವರಿಗೆ-ಮಾಣಿಕ್ಯದ ಗುರಾಣಿ.

೨೬೦. ಪುಡಿ-ದೂಳು. ಓಲಾಡುವ-ಜಲಕೇಳಿಯಾಡುವ.

೨೬೨. ಬೆಚ್ಚಂತೆ-ಬೆಸಿದಹಾಗೆ ಇರುವ; ಧಾ. ಬಿಸು, ಲೋಹ ಸಂಧಾನೇ. ಜುಂಚೆಯ-ಜೂಲು, ಕೆಲವು ಎಕಾರಾಂತವಾದ ಶಬ್ದಗಳಿಗೆ ಅಕಾರಾಂತರೂಪವುಂಟೆಂದು ತೋರುತ್ತದೆ: ಉ. ಜುಂಚೆ, ಜುಂಚೆಯ; ಕಣೆ, ಕಣೆಯ; ಪ್ರ. "ಪಿಂಗದೆ ಸೋರ್ದುದಸ್ತ್ರಮುಖದಿಂ ಕಣೆಯಂಗಳ ವೃಷ್ಟಿ" ಜಗನ್ನಾಥವಿಜಯ. ಪಾಱು-ವಿಮಾನ.

೨೬೩. ಬಚ್ಚಣೆ-ದ್ಭ. ವರ್ಣನಾ, ಬಣ್ಣದ ಕೆಲಸ. ಜುಂಜು-ಕೋಳಿಯತಲೆಯ ಜುಟ್ಟು. ಉಳ್ಕ-ಮುಚ್ಚಿಹೋಗುವ ಹಾಗೆ; ಧಾ. ಉಳ್ಕು, ದೀಪ್ತೌ. ಗೆಜ್ಜೆಯ, ಬಿಲ್ಗಳ, ಕನ್ನಡಿಯ, ಚೌರಿಯ ಇವುಗಳ ಮುಂದೆ ಪರಿ ಎಂಬುದನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಪರಿ-ಸೌಂದರ್ಯ.

೨೬೪. ಕುಂಚ-ಚೌರಿ.

೨೬೫. ಗಜಱು-ಗಾಗಳಮಾಡಿ: ಧಾ. ಗಜಱು, ಗರ್ಜನೇ.

೨೬೭. ಕುಡುಮಿಂಚು=ಕೊಂಕು+ಮಿಂಚು. ಗಾಳಿವಟ್ಟೆಯೊಳ್ನಡೆವನ-ಸೂರ್ಯನ.

೨೬೮. ಅರ್ಗಂ ನಿಟ್ಟಿಸಬಾರದು-ಯಾರಿಗೂ ನೋಡುವುದಕ್ಕೆ ಸಾಧ್ಯವಲ್ಲ.

೨೬೯. ಕುಪ್ಪಳಿಸಿದೊಡಂ-ರಾಶಿಯಾದರೂ; ಧಾ. ಕುಪ್ಪಳಿಸು, ಪುಂಜೀಕರಣೇ.

೨೭೦. ಮಣಿಯದೆ--ಹೆದರದೆ; ಧಾ. ಮಣಿ-ನಮಸ್ಕಾರೇ, ಭಯೇಚ. ಕಿಡ್ಕೈದುಗೊಂಡು-ಬಿಚ್ಚುಕತ್ತಿಯನ್ನು ತೆಗೆದುಕೊಂಡು. ಕಿಡ್ಕೈದು=ಕಿತ್ತು+ಕೈದು (ಆಯುಧ)

೨೭೧. ಪಡಲಿಡೆ-ಕೆಳಗೆ ಬಿದ್ದು ಸಾಯಲು.

೨೭೨. ಉರ್ಕುಡಿಗಳ್-ಪರಾಕ್ರಮವುಳ್ಳವರು; ಪ್ರಾಚೀನರ ಬಿರುದಾವಳಿಯು ಹೀಗೆಯೆ ರಾಜಶೇಖರದ ೬ ನೆಯ ಆಶ್ವಾಸದಲ್ಲಿಯೂ ಗಿರಿಜಾಕಲ್ಯಾಣದ ೬ ನೆಯ ಆಶ್ವಾಸದಲ್ಲಿಯೂ ಕೊಟ್ಟದೆ.

೨೭೩. ಕಡುಗ-ದ್ಭ. ಖಡ್ಗ, ಕತ್ತಿ. ಕಡಿಯಾಗೆ-ಚೂರಾಗಲು. ಉಪ್ಪರವೊಯ್ಲು-ಮೇಲುಗಡೆಯ ಪೆಟ್ಟು.

೨೭೪. ಪೂಣ್ದು-ಪ್ರತಿಜ್ಞೆಮಾಡಿ.

೨೭೫. ಬಿಱುವರಿಯ-ನಿಟ್ಟೋಟದ. ತೆಱಪು-ಅವಕಾಶ.

೨೭೬. ಸೈಗಱೆಯೆ-ತುಂಬಾಗಿ ಕರೆಯಲು; 'ಸೈ' ಎಂಬುದನ್ನು ವಿಶೇಷಾರ್ಥದಲ್ಲಿ ಧಾತುಗಳ ಹಿಂದೆ ಸೇರಿಸುವುದುಂಟು. ಉ. 'ಸೈಗಡಿದಂ, "ಸೈಗೆಡೆದಂ,' ಇತ್ಯಾದಿ. ಅಳುಂಬ-ಅಧಿಕ.

೨೭೭. ಕೆನ್ನೀರೇಱುಂದೆ= ಕೆನ್ನೀರ್+ಏಱುಂದೆ. ಮೆಯಿಕ್ಕಿದರ್-ಸತ್ತರು; ಧಾ. ಇಕ್ಕು, ತ್ಯಾಗಹನನಯೋಃ.

೨೭೮. ಕಾಡೊಪ್ಪನಲ್-ಕಾಡಿನ ಪ್ರವಾಹ. ಗೋಡೆಯಿಲರ್-ಕುದುರೆಯ ಸವಾರರು; ಗೋಡೆ-ದ್ಬ.ಘೋಟಾ.

೨೭೯. ರಾವುತ್ತರ್-ರಾವುತರು. ಗೆಲ್ಲಂಬಡೆದರ್-ಜಯಹೊಂದಿದರು; ಗೆಲ್ಲ-ಜಯ.

೨೮೦. ಸೀಸಕ-ದ್ಬ.ಶೀರ್ಷಕ, ಕಿರೀಟ. ಪಕ್ಕರೆ-ಜೂಲು. ತೇಜಿವಾರು-ತೇಜಿಯಬಾರು, ಕುದುರೆಗೆ ಕಟ್ಟಿರುವ ಚರ್ಮದ ಬಾರು.

೨೮೧. ಪೊಂದಿದ-ಸತ್ತ; ಧಾ. ಪೊಂದು, ವ.ರಣೇ. ಬಿಟ್ಟಿಕ್ಕಿದರ್= ಬಿಟ್ಟು+ಇಕ್ಕಿದರ್, ನುಗ್ಗಿಸಿ ಹೊಡೆದರು. ಅಣೆದು-ಮೇಲು ಬಿದ್ದು.

೨೮೨. ಕೋಲ್ಗಾರ್-ಶರವರ್ಷ. ಆಲಿವರಲ್-ಆಲಿಕಲ್ಲು. ನೆತ್ತಿ....ಗಳ್-ಆನೆಯ ಕುಂಭಸ್ಥಳಗಳಲ್ಲಿ ಮುತ್ತುಗಳು ಹುಟ್ಟುತ್ತವೆಂದು ಪ್ರಸಿದ್ಧಿಯಿದೆ.

೨೮೩. ಅಗಿದು-ಹೆದರಿ; ಧಾ. ಅಗಿ, ಸಂತ್ರಾಸಹರ್ಷಚರ್ವಣೇಷು. ಜೋಲೆ-ಜೋಲಾಡಿ ಹೋಗಲು.

೨೮೪. ಕೊತ್ತಿನೂಂಕಿದುದು-ಕೊಚ್ಚಿನೂಕಿತು. ಪೊಕ್ಕು+ಒಡನೆ. ನೆಣ-ವಸೆ, ಮೇದಸ್ಸು, ಮೆದಡು. ಜಾದು-ದ್ಬ.ಧಾತು, ಕೆಂಪುಕಲ್ಲು. ಮಗುಳ್ಚುವಂತೆ-ವಾಂತಿಯನ್ನು ಮಾಡುವ ಹಾಗೆ.

೨೮೫. ಆಗಳೆ ಈಂಟೆ-ಇಲ್ಲಿ ಸಂಧಿಯಿಲ್ಲ. ಶ. ದ. 56. ಮೆಯ್ಗಲಿಗಳ-ವೀರರ. ಬಕ್ಕಣ-ಹೊಸಗನ್ನಡದಲ್ಲಿ ಬೊಕ್ಕಣ, ತಿಂಡಿ. ತವೆ-ಹೆಚ್ಚಿ, ಸಮೃದ್ಧಿಯಾಗಿ. ಮೆಯ್ಯೊಲೆದು-ಮೆಯ್ಯು ಒಂದು ಕಡೆಗೆ ಜೂಗಲಾಡಿ. ನಾಣ್-ನಾಚಿಕೆ. ಕೈಪಱೆ= ಕೈ+ಪಱೆ, ಕೈಚಪ್ಪಾಳೆ.

೨೮೬. ಕೊಕ್ಕರಿಕೆಯಾದ-ಭೀತಿಯಿಂದ ಅಂಗಸಂಕೋಚವನ್ನುಂಟುಮಾಡುವ. ಒಡ್ಡು-ಸೈನ್ಯ. ಅಲಗನುಗಿದು-ಕತ್ತಿಯನ್ನು ಹಿರಿದುಕೊಂಡು. ಪಾಡು (-ಸೈನ್ಯವು)+ಅಟಿಯೆ

೨೮೭. ಎಬ್ಬಟ್ಟಿದಂ-ಹಿಂದಟ್ಟಿದನು; ಧಾ. ಎಬ್ಬಟ್ಟು, ಅನುಧಾವನೇ.

೨೮೮. "ತೇನತೇನಮೆಂದು ಮೇಲೆ ಮೇಲೆ" ಶ. ದ. ಪು. 404 ಜಾಱುಂಗಲ್-ಜಾರುಗುಪ್ಪೆ. ಕೊಳುಗುಳ-ಯುದ್ಧ. ಪೊಲಂಬುಗಿಡಿಸೆಯುಂ-ಮಾರ್ಗತಪ್ಪಿಸಿಯೂ. ತಾಯ್ಮಟಲ್ದೋಱು-ತಳದ ಮರಳು ತೋರುವಂತೆ. ನಿಬ್ಬರ-ದ್ಭ.ನಿರ್ಭರ, ವೇಗವಾಗಿ.

೨೯೦. ಕೋವಣ-ದ್ಭ.ಕೌಪೀನ, ಕಚ್ಚೇಪಾಡೆ. ಗುಂಡಿಗೆ-ದ್ಭ. ಕುಂಡಿಕಾ, ಜಲಪಾತ್ರೆ. ನೇವರಿಸಿದ-ಸವರಿಕೊಂಡ. ಈ ಪದ್ಯದಲ್ಲಿ ಈಶ್ವರಮನ್ಮಥರ ಯುದ್ಧವನ್ನು ನೋಡುವುದಕ್ಕೆ ದೇವಾದಿಗಳು ಬ್ರಹ್ಮ, ವಿಷ್ಣು, ಇಂದ್ರ, ಈಶಾನರು ಬಂದಿದ್ದರೆಂದು ಹೇಳಿದೆ; ಇಲ್ಲಿ ಬಿಸುಗಣ್ಗೊರವ-ತ್ರಿಮೂರ್ತಿಗಳಲ್ಲಿ ಒಬ್ಬನಾದ ಶಿವನಲ್ಲವೆಂದು ತೋರುತ್ತದೆ.

೨೯೨. ಪರ್ದು-ಗರುಡ.

೨೯೩ ಕರಂ-(ಅವ್ಯಯ,) ಅತಿಯಾಗಿ, ಹೆಚ್ಚಾಗಿ. ಪೊರೆಯೇಱು-ಪೋಷಿಸಲ್ಪಡು.

೨೯೫. ಇಟ್ಟಳವೆನಿಸಿದ-ಸಂದಣಿಯಾಗಿ ಗುಂಪುಕಟ್ಟಿಕೊಂಡು ನಿಂತ.

೨೯೮. ಕೆನ್ನಂ-ವಿಶೇಷವಾಗಿ; ಶ. ದ. 304, ಅವ್ಯಯ.

೨೯೯. ಗೊಣೆ-ದ್ಭ.ಗುಣ, ಬಿಲ್ಲಿನ ಹೆದೆ.

೩೦೦ ಕೂಡದರ-ಅನುರಾಗವಿದ್ದೂ ಒಂದು ದಿವಸವೂ ಸೇರಲವಕಾಶವಿಲ್ಲದವರ. ಬಿರ್ಚಿದೋಪರ-ಅಗಲಿದ ಪ್ರಿಯರ. ನಾಣ್ಗಳ್-ಲಜ್ಜೆಗಳು.

೩೦೧ ಜಂಕಿಸು-ಅರಚಿಕೊಳ್ಳುವಂತೆ ಮಾಡು.

೩೦೨ ಎಡೆಗೊಂಡು-ಎಡೆಗೊಳ್ಳಲು.

೩೦೩ ಒತ್ತಂಬರಿದು-ಆಕ್ರಮಿಸಿ, ಮೇಲು ಬಿದ್ದು. ಪೆಳರಿ-ಹೆದರುವ ಹಾಗೆ, ಧಾ. ಅಳರ್, ಪೆಳರ್ ಭಯೇ.

೩೦೪. ಕರಿಕು-ಮಸಿ, ಇದ್ದಲು.

೩೦೫. ಈಂಬ-ಹೆರುವ; ಧಾ. ಈನ್, ತಿರ್ಯಕ್ಪ್ರಸವೇ. ಪಣಿದರ-ದ್ಭ. ಫಣಿಧರ, ಈಶ್ವರ.

೩೦೭. ಮಾದೇವಿ-ಪಾರ್ವತಿ. ಕೈಮೊಗ-ಹಸ್ತತಲ. ಕಾವನಂಬುಗಳ್ತಾವೈದುಂ-" ಅರವಿನ್ದ ಮಶೋಕಂ ಚ ಚೂತಂ ಚ ನವಮಲ್ಲಿಕಾ | ನೀಲೋತ್ಪಲಂಚ ಪಂಚೈತೇ ಪಂಚಬಾಣಸ್ಯ ಸಾಯಕಾಃ ||" ಅಮರ. ಬಿಡೆ-ಅವ್ಯಯ ; ಅತಿಶಯಾರ್ಥದಲ್ಲಿ ನಡೆ, ಸಲೆ, ತವೆ, ಮಿಗೆ, ಇವುಗಳಂತೆ ಪ್ರಯೋಗಿಸಲ್ಪಡುತ್ತದೆ.

೩೦೮. ಒಟ್ಟಜೆಗೆಟ್ಟು-ಗೌರವವನ್ನು ಹಾಳುಮಾಡಿಕೊಂಡು, ಶಕ್ತಿಗುಂದಿ ; " ಒಟ್ಟಜೆ, ಅತಿಶಯಂ " ಶಬ್ದಸಾರ ; "ಒಟ್ಟಜೆ-ಸಂದಣಿ" ಶಬ್ದಮಂಜರಿ, ಆಗ ಚದುರಿಹೋಗಿ. ನೆಲನನೊಡಂಬಟ್ಟರೆ-ಮೂರ್ಛಿತರಾಗಿ ನೆಲದಲ್ಲಿ ಬೀಳಲು.

೩೧೦ ಅಗುರ್ಬು-ಅತಿಶಯ. ಸಾಪದಕ್ಕರ-ಶಾಪಾಕ್ಷರ. ಕೆತ್ತುವ-ನಡುಗುವ. ಕನಲ್ಕೆ-ಕೋಪ. ಕೂರದಂಟು-ಕಠಿನವಾದ ದಂಟು.

೩೧೧. ಕೊಂಬುಗೊಂಡು-ಗುಪ್ತಸ್ಥಲವನ್ನು ಸೇರಿ; ಶ. ದ. ಪು. 403. ಮಲ್ಲಟಿ-" ಬೆರಗಪ್ಪ ಭಾವಂ " ಕ. ಶ. ೫೦. ಕೈಮಱಿಯೇ-ಧಾ. ಕೈಮಱಿ ವಿಸ್ಮಯೇ.

೩೧೩. ಪರಿಗಿಡೆ-ಹರಿಯದಂತೆ ; ಅಱುತುದು-ಒಣಗಿಹೋಯಿತು; ವಿರಹತಾಪಾಧಿಕ್ಯದಿಂದ ಸುರಿವ ಕಣ್ಣನೀರು ಕಪೋಲದ ಮೇಲೆ ಹರಿಯುವುದಕ್ಕೆ ಮುಂಚೆಯೇ ಆರಿಹೋಯಿತು. ಕಱಂಗಿ-ಕಪ್ಪಾಗಿ ; ಧಾ. ಕಱಂಗು- ಕಾರ್ಷ್ಣ್ಯೇ. ವಳ್ಳುರಿ-ಹೆಚ್ಚಾದ ಉರಿ.

೩೧೪. ಕೊರಗಿ-ಒಣಗಿ. ಸೀಕರಿವೋದುದು-ಸೀದು ಕರಿಯಾಗಿ ಹೋಯಿತು.

೩೧೫. ಪಸೆ-ಹೊಸಗನ್ನಡದಲ್ಲಿ ಹಸೆ. ಪಚ್ಚ-ಆಭರಣ. ಜೋಗಿಣಿ-ದ್ಭ. ಯೋಗಿನಿ. ಕೊಡ್ಕಸಱ್= ಕೋಡುವ+ಕೆಸಱ್, ಶೀತಲವಾದ

ಕರ್ದಮ. ಪಚ್ಚೆಲೆ= ಪಚ್ಚನೆ+ಎಲೆ, ಹಸಿಯೆಲೆ; "ಪಚ್ಚನೆ" ಎಂಬುದು ವ್ಯಂಜನಾದಿಯಾದ ಪದದೊಡನೆ ಸಮಾಸವಾದರೆ "ಪಂ" ಎಂದೂ, ಸ್ವರಾದಿಯಾದ ಪದದೊಡನೆ ಸಮಾಸವಾದರೆ "ಪಚ್ಚ" ಎಂದೂ ಆಗುತ್ತದೆ. ಉ. "ಪಂದೊವಲ್" "ಪಂದಳಿರ್" "ಪಚ್ಚಡಕೆ ,, ಇತ್ಯಾದಿ. ನೀರ್ವೆಣ್-ಜಲಮಾನುಷಿ.

೩೧೬. ಕುಳಿರ್ವ-ಶೀತಲವಾದ; ದಿಂಟಿ-ದಿಣ್ಣೆ. ಸಮೆದಿರ್ಪ ಬೆಟ್ಟ-ಕೃತಕಾಚಲ. ಮಂಡವ-ದ್ಭ.ಮಂಟಪ.

೩೧೭. ಪಟಿವ-ಹಾಸ್ಯಮಾಡುವ; ಧಾ. ಪಟಿ, ನಿಂದಾಯಾಂ.

೩೧೮. ಪುರುಳಿ-ಗಿಳಿ. ಈವೇಂ-"ಎನ್" ಎಂಬ ಉತ್ತಮ ಪುರುಷದ ಏಕವಚನ ಪ್ರತ್ಯಯಕ್ಕೆ "ಏನ್" ಎಂಬ ರೂಪಾಂತರ ವುಂಟು. ಶ. ಶಾ|| 442

೩೧೯. ಅರಸಾದೆ, ಕೇಳ್ದೈ-ಮಧ್ಯಮಪುರುಷದಲ್ಲಿ ಅಯ್, ಐ. ಎ ಎಂಬ ಪ್ರತ್ಯಯುಗಳು ಬರುವುದುಂಟು.

೩೨೧. ಕೈವಂದ-ಫಲಿತವಾದ; ಪ್ರ. "ಬಂದ ಮಾವು"; ಇಲ್ಲಿ "ಕೈ" ಎಂಬುದು ವಿಶೇಷಾರ್ಥವನ್ನು ಕೊಡುವಂತೆ ತೋರುತ್ತದೆ. ಪ್ರ. ಕೈಮಿಗೆ, ಕೈಮಱೆ, ಇತ್ಯಾದಿ. ಕಸವರ-ಚಿನ್ನ. ನೀಱೆಯ....ತಳಿರ್ತಂತೆಯುಂ-ಸ್ತ್ರೀಯರ ಪಾದಾಘಾತದಿಂದ ಅಶೋಕವೃಕ್ಷವು ಪುಷ್ಪಿಸುವುದೆಂದು ವರ್ಣಿಸುವುದು ಕವಿಸಮಯ. ದೂರಿಸು-"ಚಿಂತಿಪುದು" ಶಬ್ದಸಾರ.

೩೨೨. ನಾಚಿಕೆಗೆಟ್ಟು ಓಡಿದ ಬ್ರಹ್ಮನನ್ನು ಹಿಂದಟ್ಟಿದ, ಸಮುದ್ರದಲ್ಲಿ ನಿದ್ದೆಮಾಡುವ ವಿಷ್ಣುವನ್ನು ಜಯಿಸಿದ, ಈಶ್ವರನನ್ನು ಗೆಲ್ದ ಎಮ್ಮೊಡಯನು. ಅದಟಂ-ಪರಾಕ್ರಮಶಾಲಿ.

೩೨೪. ಅಡಪದ-ತಾಂಬೂಲಕರಂಡಕವನ್ನು ಹಿಡಿದ. ಡವಕೆ-ಕಾಳಂಜಿ. ಕಜ್ಜಳ-ದ್ಭ.ಕಜ್ಜಲ, ಕಣ್ಣುಕಪ್ಪು.

೩೨೫. ಮೊಗ್ಗೆಯ-ಮೊಗ್ಗುಗಳಿಂದ ಮಾಡಿದ. ಅಟ್ತ-ಆಶೆ. ಪರಿವಡೆದಿರೆ-ಒಪ್ಪಿರಲು, ಅಮರಿ ಇರಲು.

೩೨೬. ಎಡೆನೆಱೆಯದು-ಸ್ಥಳ ಸಾಲದೆ ಹೋಯಿತು.

೩೨೮. ಕೊಡಕೆವರಂ-ಕಿವಿಯವರೆಗೂ.

೩೨೯. ನೀಱನ-ದಯಿತನ, ಇಲ್ಲಿ ಮನ್ಮಥನ. ಬರೆ-ಆಧಿಕ್ಯಾರ್ಥದಲ್ಲಿ ಅವ್ಯಯ.

೩೩೦. ಜಗುಬ್ದು-ಜಾರಿಹೋಗಿ; ಉಡೆ-ಉಡುವ ಬಟ್ಟೆ. ಇಲ್ಲಿ ಕವಿಯು ಅವಯವಗಳ ಸೌಂದರ್ಯವನ್ನು ಪ್ರಕಾರಾಂತರದಿಂದ ವರ್ಣಿಸಿದ್ದಾನೆ; ಅದು ಹೇಗೆ? ಯೋಚಿಸಿರಿ.

೩೩೧. ಅಡಿದುವು ಎಂಬ ಕ್ರಿಯೆಗೆ ಪೊಸವಿಾಂಬೊಣರ್ಗಳ್ ಕರ್ತೃ. ಪೊಣರ್=ಎರಡು; "ಅಮಳ್, ಜುಗುಮ, ಪೊಣರ್, ಎರಡು" ಕರ್ಣಾಟಕನಿಘಂಟು 9. ಪೊಸವಿಾಂಬೊಣರ್-ಏಕೆ? ಚೆಲ್ವಿನೆ=ಚೆಲ್ವಿಂ+ಎ, ಸೌಂದರ್ಯದಿಂದಲೇ, ಇದೊಂದು ಪಾಠ.

೩೩೨. ಸವನಿಸೆ--ಸವನಿಸುವ ಹಾಗೆ, ಹಮ್ಮದಂ--ಮೂರ್ಛೆ. ನವಿರ್-ಕೂದಲು. ತೆಕ್ಕದಂ-ಮನ್ಮಥದ್ರವ. ತವಕಿಪ-ಆತುರಪಡುವ. ಸುಪಿಲ್-"ಸಂಭೋಗ" ಚತು. ಸುಸಿಲನೊಪ್ಪಿಸೆ-ಎಂದರೇನು?

೩೩೫. ನಾಣ್-ಲಜ್ಜೆ. ೩೩೬. ಒತ್ತೆಯನಿತ್ತನಂ-ಒತ್ತೆ-ಪಣ್ಯಸ್ತ್ರೀಯರಿಗೆ ಕೊಡುವ ಹಣ.

೩೩೭. ಐಸರಂ-ಐದು ಎಳೆಯ ಹಾರ.

೩೩೯. ದೊರೆವೆತ್ತೊಪ್ಪುವ-ಒಂದಕ್ಕೊಂದು ಸದೃಶವಾದ.

೩೪೦. ಚೊಕ್ಕ+ಅಳವಪ್ಪ-ಮನೋಹರವಾದ; "ಚೊಕ್ಕಂ, ಮನೋಹರಂ" ಶಬ್ದಸಾರ.

೩೪೨. ನಿಗಳ-ಕಾಲ ತಂಡೆ. ೩೪೩. ಓರಗೆ-ಸದೃಶ.

೩೪೪. ಒಡಲ-ಒಡಲು, ಪ್ರಥಮಾರ್ಥೇಷಷ್ಠಿ. ಪಳಿಕುವೆಸದ-ಸ್ಫಟಿಕಶಿಲೆಯ, ಬೆಸ-ಕೆಲಸವುಳ್ಳ ಎಂದರೆ ಸ್ಫಟಿಕಮಯವಾದ.

೩೪೬. ಪೊಸತಾಗಿರೆ--ವಿಜಾತೀಯವಾದ ಕಾವ್ಯವಾಗಿರುವುದರಿಂದ.

೩೪೭. ಒಲವು+ಎರ್ದೆಯಂ. ಅತ್ತಳ-ತವಿಳಲ್ಲಿ ಅತಿಶಯ (?)

೩೪೮. ದೋಸ-ದ್ಭ. ದೋಷ. ಬಾಸಣ-ದ್ಭ. ಭಾಷಣ. ನಾಬ್ಕಳೊಳ್-ನಾಡುಗಳಲ್ಲಿ.

೩೪೯. ಪದಪು--" ಪದಪೆಂದನೆ ಸಂರಂಭಂ." ಚತುರಾಸ್ಯ. ಆಡಿದ ಮಾತೆಲ್ಲರ ಬಾಡ್ಕುಯಪ್ಪ-ಸಕಲರಿಗೂ ಹಿತಕರವಾದ ಮಾತುಗಳನ್ನು ಆಡುತ್ತಿರುವ. ತನ್ನಱವಟ್ಟಿಗರ್-ತನ್ನ ಧರ್ಮಮಾರ್ಗದಲ್ಲಿ ನಡೆಯುವವರು. ಈವ, ಅಪ್ಪ, ಕಾಣ್ಬ, ತೋಱುವ-ಇವು ಅರುಹಂತನಿಗೆ ವಿಶೇಷಣಗಳು.

೩೫೦. ಗದ್ಯ. ಪಸುಳೆವಿಸಿಲ್--ಎಳಬಿಸಿಲು. ಮಸಕ--ವೇಗ. ಎಸಳ್ಮಿಸುಪ-ದಳವನ್ನು ಬಿಡುತ್ತಿರುವ, ವಿಕಸಿಸುತ್ತಿರುವ. ಅಸದಳಂ-ಅಸದೃಶವಾಗಿ. ಬಿಜ್ಜೆವಳ-ದ್ವ.ವಿದ್ಯಾಬಲ, ಪಾಂಡಿತ್ಯದ ಸಾಮರ್ಥ್ಯ.

## —ವೃತ್ತಗಳು.—

ಈ ಗ್ರಂಥದಲ್ಲಿ ಬರುವ ವರ್ಣವೃತ್ತಗಳು—(1) ಶಾರ್ದೂಲವಿಕ್ರೀಡಿತಂ, (2) ಉತ್ಪಲಮಾಲೆ, (3) ಮತ್ತೇಭವಿಕ್ರೀಡಿತಂ, (4) ಚಂಪಕಮಾಲೆ, (5) ಸ್ರಗ್ಧರೆ, (6) ಮಹಾಸ್ರಗ್ಧರೆ, (7) ಮಾಲಿನಿ; ಮಾತ್ರಾವೃತ್ತಗಳು—(8) ಉತ್ಸಾಹವೃತ್ತ, (9) ಉತ್ಸಾಹರಗಳೆ, (10) ಕಂದ.

| ಇವಕ್ಕೆ ಲಕ್ಷಣ— | | | ಉದಾಹರಣೆ. |
|---|---|---|---|
| (1) ಕ್ಕೆ ಮ-ಸ-ಜ-ಸ-ತ-ತ-ಗಂ॥ | ಯತಿ ೧೨ನೆಯ ಅಕ್ಷರದಲ್ಲಿ. | | (ಪದ್ಯ. ೫) |
| (2) ಭ-ರ-ನ-ಭ-ಭ-ರ-ಲ-ಗಂ॥ | ೧೧ | ,, | (ಪ. ೧) |
| (3) ಸ-ಭ-ರ-ನ-ಮ-ಯ-ಲ-ಗಂ॥ | ೧೩ | ,, | (ಪ. ೧೯) |
| (4) ನ-ಜ-ಭ-ಜ-ಜ-ಜ-ರ॥ | ೧೩ | ,, | (ಪ. ೩) |
| (5) ಮ-ರ-ಭ-ನ-ಯ-ಯ-ಯ॥ | ೭, ೧೪, ೨೧ | ,, | (ಪ. ೮೮) |
| (6) ಸ-ತ-ತ-ನ-ಸ-ರ-ರ-ಗಂ॥ | ೧೫ | ,, | (ಪ. ೧೧೬) |

ಈ ೬ ವೃತ್ತಗಳು ಕನ್ನಡದಲ್ಲಿ ವಿಶೇಷವಾಗಿ ಬರುವುವು; ಇವನ್ನು ಗುರುತು ಹಿಡಿಯುವುದಕ್ಕೆ ನಾಗವರ್ಮ ಛಂದಸ್ಸಿನಲ್ಲಿ—

" ಗುರುವೊಂದಾದಿಯೊಳುತ್ಪಲಂ; ಗುರು ಮೊದಲ್ ಮೂಱಾಗೆ [ಶಾರ್ದೂಲಮಾ |
ಗುರು ನಾಲ್ಕಾಗಿರಲಂತು ಸ್ರಗ್ಧರೆ; ಲಘುದ್ವಂದ್ವಂ ಗುರುದ್ವಂದ್ವಮಾ ||

ಗಿರೆ ಮತ್ತೇಭ ; ಲಘುದ್ವಯತ್ರಿಗುರುವಿಂದಕ್ಕುಂ ಮಹಾಸ್ರಗ್ಧರಂ ; ||
ಹರಿಣಾಕ್ಷೀ, ಲಘುನಾಲ್ಕುಚಂಪಕಮಿವಾಱು ಖ್ಯಾತಕರ್ಣಾಟಕಂ || "

ಎಂದು, ಸುಲಭೋಪಾಯಗಳು ಕೊಟ್ಟಿದೆ.

(7) ನ-ನ-ಮ-ಯ-ಯ|| ಯತಿ ೮ ರಲ್ಲಿ, (ಪ. ೨೩೫)

(8) ಮೂರು ಮಾತ್ರೆಗಳುಳ್ಳ ೭ ಗಣಗಳೂ ಮತ್ತು ಒಂದು ಗುರುವೂ ಪ್ರತಿಪಾದದಲ್ಲಿಯೂ ಇರಬೇಕು. ಇದರ ಗಣಗಳು ಸರ್ವಲಘುವಾಗಿಯೂ ಅಥವಾ ಗುರು ಲಘುವಾಗಿಯೂ ಇರಬೇಕೇ ಹೊರತು ಲಘುಗುರುಗಳಾಗಿರಕೂಡದು. ಅಲ್ಲದೆ ಈ ವೃತ್ತವು ಲಯಗ್ರಾಹಿಯಾಗಿರಬೇಕು. (ಪ. ೨೧೫) ಇದು ಉತ್ಸಾಹವೃತ್ತದ ಲಕ್ಷಣ.

(9) ಗಣ ನಿಯಮಕ್ಕೆ ಒಳಗಾಗದೆ ತಾಳದ ಗಣನೆಗೊಡಂಬಟ್ಟು ಪ್ರತಿಪಾದದಲ್ಲಿಯೂ ಮಾತ್ರೆಗಳು ಸಮವಾಗಿರಲು, ರಗಳೆ ; ಅದರಲ್ಲಿ ಪ್ರತಿಪಾದದಲ್ಲಿಯೂ ೨೪ ಮಾತ್ರೆಯುಳ್ಳದ್ದು ಉತ್ಸಾಹರಗಳೆ. (ಪ. ೩೪೪)

(10) " ಅಸಮಾಂಘ್ರಿಗೆ ಮೂಱುಗಣಂ ಮಸಾನ್ತಜನಮಧ್ಯದಿಂ ಸಮಕ್ಕಯ್ದುಗಣಂ|| ಬೆಸನೆಡೆಗಜಣನಿಯಮದಿನೆಸೆವುದು ಕಂದಂ ಚತುಃಕಲದ್ವ್ಯಷ್ಟಗಣಂ || " ಇದಕ್ಕೆ ಅರ್ಥ—

ಮೊದಲನೆಯ ಮತ್ತು ಮೂರನೆಯ ಪಾದದಲ್ಲಿ ಮೂರು ಗಣಗಳಿರಬೇಕು ; ಎರಡನೆಯ ಮತ್ತು ನಾಲ್ಕನೆಯ ಪಾದದಲ್ಲಿ, ಮಗಣ ಅಥವಾ ಸಗಣವೇ ಕೊನೆಯಾಗಿಯೂ, ಜಗಣ ಅಥವಾ ನಗಣವೇ ಮಧ್ಯವಾಗಿಯೂ ಇರುವ ಐದು ಗಣಗಳಿರಬೇಕು ; ಆ ಗಣಗಳಲ್ಲಿ ವಿಷಮಗಣವು ಜಗಣವಾಗಿರಕೂಡದು ; ಒಟ್ಟು ಕಂದದಲ್ಲಿ ನಾಲ್ಕು ಮಾತ್ರೆಗಳುಳ್ಳ ಎರಡು ಎಂಟು ಗಣಗಳಿರಬೇಕು.

